# ನಮ್ಮ ಮಾನಸ

**ಫೆಬ್ರವರಿ 2008**

ಸಂಪುಟ : 1    ಸಂಚಿಕೆ : 10



*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*



*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*© : 26757159*




●

ಚಂದಾ ವಿವರ

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ಪರಿವಿಡಿ


* ಹೊಣೆ 'ಅವಳ'ದ್ದೋ, ವ್ಯವಸ್ಥೆಯದ್ದೊ ! ... 3
* ಮೊದಲ ಪಂಜಾಬಿ ಕಾದಂಬರಿ 'ಸುಂದರಿ'
  *ಗುರುಪ್ರೀತ್ ಬಾಲ್* ... 5
* 'ಶ್ರೀಮತಿ ಯಶೋದಾ ರಾಗೌ ಟ್ರಸ್ಟ್' ಹೊರತಂದಿರುವ ಒಂಬತ್ತು ಉಪಯುಕ್ತ ಪುಸ್ತಕಗಳು
  *ಡಾ. ಸಿ.ಜಿ. ಉಷಾದೇವಿ* ... 11
* ಸ್ವಾತಂತ್ರ್ಯೋತ್ತರ ಕನ್ನಡ ಮಹಿಳಾ ಕಾವ್ಯ
  *ಡಾ. ವಿನಯಾ* ... 14
* ಚಂದ್ರಕ್ಕ
  *ತಾಜುಮಾ* ... 18
* ಪತ್ರೋತ್ತರಗಳು




## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ*
*ಡಿ.ಡಿ. ಮೂಲಕ ಕಳಿಸಬಹುದು*

– – –

*ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ*
*ಚಂದಾ ನವೀಕರಣಕ್ಕೆ ಸಂಪರ್ಕಿಸಿ*

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ, ವಿಜಯನಗರ*
*ಮೈಸೂರು – 570 017*



ಸಂಪಾದಕೀಯ

# ಹೊಣೆ 'ಅವಳ'ದ್ದೋ, ವ್ಯವಸ್ಥೆಯದ್ದೊ !

ಪುರಾತನ ಗ್ರೀಕ್ ಯುರಿಪಿಡಿಸ್‌ನ ನಾಟಕ ಮೀಡಿಯಾದಲ್ಲಿ ನಾಯಕಿ ತನ್ನ ಗಂಡ ತನಗೆ ಮಾಡಿದ ಮೋಸ, ಅನ್ಯಾಯದ ವಿರುದ್ಧ ಸಿಡಿದೇಳುತ್ತಾಳೆ. ಆಕೆ ತನ್ನ ಪ್ರತಿಭಟನೆಗಾಗಿ ತನ್ನ ಮಕ್ಕಳನ್ನೆ ಬಲಿ ನೀಡುತ್ತಾಳೆ. ಇದು ಆಕೆಯ ನೋವು, ಸಿಟ್ಟು, ಪ್ರತಿಭಟನೆಯ ಕಿಡಿ. ಇದು ಪ್ರತಿಯೊಬ್ಬ ಸಾಮಾನ್ಯ ಮಹಿಳೆಯಲ್ಲೂ ಕಂಡುಬರುತ್ತಿದೆ. ಆದರೆ ಇದು ದುರಂತಮಯ ಆಯ್ಕೆಯ ಹಾದಿ.

ಗೀತಾ ತನ್ನ ಗಂಡ ಕೊಡುತ್ತಿದ್ದ ಅಮಾನುಷವಾದ ಹಿಂಸೆಯನ್ನು ಹತ್ತು ವರ್ಷಗಳ ಕಾಲ ಹೊಟ್ಟೆಯಲ್ಲಿ ನುಂಗಿಕೊಂಡು ಸಹಿಸಿದ್ದಳು. ತನ್ನ ಎರಡು ಎಳೆಯ ಕಂದಮ್ಮಗಳಿಗಾಗಿ ಹಠದಿಂದ ಬದುಕಿದ್ದಳು. ಆದರೆ ಕ್ರಮೇಣ ಆಕೆಯ ಸಹನಾಶಕ್ತಿ ಕುಂದಿತು. ಎರಡೂ ಮಕ್ಕಳನ್ನು ತಬ್ಬಿಕೊಂಡು ತವರಿನ ಹಾದಿ ಹಿಡಿದಳು. ಮಗನ ಆಶ್ರಯದಲ್ಲಿದ್ದ ತಂದೆ-ತಾಯಿ ಮಗಳಿಗೆ ನೆರವಾಗುವ ಸ್ಥಿತಿಯಲ್ಲಿ ಇರಲಿಲ್ಲ. ತನಗೊಂದು ಬೇರೆ ಮನೆಯನ್ನು ಮಾಡಿಕೊಡಿ ನಾಲ್ಕು ಮನೆ ಪಾತ್ರೆ ತೊಳೆದು ಮಕ್ಕಳನ್ನು ಸಾಕುತ್ತೇನೆಂದು ಬೇಡಿಕೊಂಡಳು. ತಾನೇ ಕೂಲಿ ನಾಲಿ ಮಾಡಿ ಓದಿಸಿದ್ದ ಅಣ್ಣ, ಸ್ಕೂಲ್ ಮೇಷ್ಟ್ರಾಗಿದ್ದರೂ ಇವಳ ಮಾತು ಕಿವಿಯ ಮೇಲೆ ಹಾಕಿಕೊಳ್ಳಲೇ ಇಲ್ಲ. ಗೀತಾಳಿಗೆ ಬಸ್ ಚಾರ್ಜ್ ನೀಡಿ ಪುನಃ ಗಂಡನ ಮನೆಗೆ ಕಳಿಸಿದರು. ಆದರೆ ಆಕೆ ತನ್ನಿಬ್ಬರು ಮಕ್ಕಳನ್ನು ತನ್ನ ಸೀರೆಯ ಸೆರಗಿಂದ ಸೊಂಟಕ್ಕೆ ಬಿಗಿದುಕೊಂಡು ಕೆರೆಗೆ ಹಾರಿದಳು! ಇತ್ತೀಚಿಗೆ ಶಾಂತಾ ಎಂಬ ಮಹಿಳೆ ಗಂಡನ ಕಿರುಕುಳ ತಡೆಯಲಾರದೆ, ಮಕ್ಕಳಿಗೆ ಚುಚ್ಚುಮದ್ದು ನೀಡಿ ಮಕ್ಕಳನ್ನು ಸಾಯಿಸಿದ್ದಾಳೆ. ಸುಧಾ, ಮಗಳನ್ನು ಸಾಯಿಸಲು ಪ್ರಯತ್ನಿಸಿ ಆತ್ಮಹತ್ಯೆ ಮಾಡಿಕೊಂಡಿದ್ದಳು. ಇಂಗ್ಲೆಂಡಿನಲ್ಲಿದ್ದ ೨೭ ವರ್ಷದ ನವಜೀತ ಸಿದ್ದು ತನ್ನ ಮೂರು ಮಕ್ಕಳನ್ನು ರೈಲು ತೋರಿಸುತ್ತೇನೆಂದು ಕರೆದುಕೊಂಡು ಹೋಗಿ ಮಕ್ಕಳೊಂದಿಗೆ ಆತ್ಮಹತ್ಯೆ ಮಾಡಿಕೊಂಡಳು. ಮೂರು ತಿಂಗಳ ನಂತರ ಆಕೆಯ ತಾಯಿಯೂ ಆತ್ಮಹತ್ಯೆ ಮಾಡಿಕೊಂಡಳು. ಇಂತಹ ಘಟನೆಗಳು ಹೆಚ್ಚಾಗುತ್ತಿರುವುದು ತೀವ್ರ ಆತಂಕಕಾರಿ ವಿಚಾರವಾಗಿದೆ.

ಇಂತಹ ಘಟನೆಗಳನ್ನು ವರದಿ ಮಾಡುವ ಪತ್ರಿಕೆಗಳಲ್ಲಿ, ಇಂತಹ ತಾಯಂದಿರೂ ಇದ್ದಾರೆಯೇ? ವೇದ, ಗಾದೆ ಸುಳ್ಳಾಗಬಹುದು, ಪ್ರಪಂಚದಲ್ಲಿ ಕೆಟ್ಟ ತಾಯಂದಿರೂ ಇರಬಲ್ಲರೆ? ತಾವು ಬೇಕಾದರೆ ಸಾಯಲಿ, ಮಕ್ಕಳನ್ನು ಯಾಕೆ ಸಾಯಿಸಬೇಕು ಎಂದು ಟೀಕಿಸಲಾಗುತ್ತಿದೆ. ಯಾವ ಮಹಿಳೆ ತನ್ನ ಮಕ್ಕಳಿಗೆ ತಾನೆ ಕೈಯಾರೆ ವಿಷವುಣಿಸಿಯೋ, ಕುತ್ತಿಗೆಗೆ ಹಗ್ಗ ಬಿಗಿದೊ, ಬಾವಿಗೆ ತಳ್ಳಿಯೋ ತಾನೂ ಸಾಯಲು ಬಯಸುತ್ತಾಳೆ? ಆಕೆಯ ನಿರ್ಧಾರದ ಹಿಂದಿರುವ ಒತ್ತಡಗಳೇನು? ಸಾಮಾನ್ಯವಾಗಿ ಹೆಣ್ಣುಮಕ್ಕಳು ತಾನು ಅನುಭವಿಸಿದ ಸ್ಥಿತಿ ತನ್ನ ಮಕ್ಕಳಿಗೂ ಬರಬಾರದೆಂಬ ನೋವಿನಿಂದ ಇಂತಹ ದುಡುಕು ನಿರ್ಧಾರಗಳಿಗೆ ಶರಣಾಗುತ್ತಿರಬಹುದು.

ಹಿಂಸೆಯ ಸ್ವರೂಪಗಳು ಮಹಿಳೆಯರನ್ನು ಇನ್ನೂ ಅಸಹಾಯಕರನ್ನಾಗಿಸುತ್ತಿವೆ. ಗಂಡನಿಂದ ತಗಲಿದ ಏಡ್ಸ್‌ನ ಭಯ, ಗಂಡನ ಬೇಜವಾಬ್ದಾರಿತನದಿಂದ ಉಂಟಾಗುವ ಮಕ್ಕಳ ಭವಿಷ್ಯದ ಆತಂಕ, ಮಕ್ಕಳ ಅಭದ್ರತೆಯ ಆತಂಕ, ಮಕ್ಕಳ ಮೇಲೆ ಮನೆಯವರಿಂದಲೇ ನಡೆಯುವ ಲೈಂಗಿಕ ಕ್ರೌರ್ಯ ಮೊದಲಾದ ಹಲವು ಬಗೆಯ ಹಿಂಸೆಗಳ ಭಯದಿಂದಾಗಿ ತಾನು, ತನ್ನ ಮಕ್ಕಳೊಂದಿಗೆ ಸಾಯುವ ನಿರ್ಧಾರವನ್ನು ಮಾಡುತ್ತಿರಬಹುದು.

ಅಸಹಾಯಕತನದ ಪರಮಾವಧಿ ಹಂತದಲ್ಲೂ ಮಹಿಳೆ, ಒಂಟಿಯಾದರೂ ತನ್ನ ಮಕ್ಕಳ ಉಳಿವಿಗಾಗಿ ಪ್ರತಿಭಟಿಸುತ್ತಲೇ ಇರುತ್ತಾಳೆ. ಯಾವುದೇ ಆಯ್ಕೆಗಳಿಲ್ಲದಾಗ, ಅನಿವಾರ್ಯ ಸ್ಥಿತಿಯಲ್ಲಿ ತನ್ನ, ಹಾಗೂ ತನ್ನ ಮಕ್ಕಳ ಸಾವನ್ನು ಸಹ ಪ್ರತಿಭಟನೆಯ ಅಸ್ತ್ರವಾಗಿ ಬಳಸಿಕೊಳ್ಳುತ್ತಿದ್ದಾಳೆ.

ಪುರುಷಪ್ರಧಾನವಾದ ನಮ್ಮ ಕೌಟುಂಬಿಕ ವ್ಯವಸ್ಥೆಯಲ್ಲಿ ಸಂಬಂಧಗಳು ಸಂಪೂರ್ಣವಾಗಿ ಪ್ರತ್ಯೇಕಗೊಂಡು ಖಾಸಗೀ ಸಂಬಂಧಗಳಾಗಿವೆ. ಕುಟುಂಬದ ಸಂಬಂಧಗಳು ಸಾಮಾಜಿಕ ನೆಲೆಯಲ್ಲಿ, ಸಾಮಾಜಿಕ ಜವಾಬ್ದಾರಿಯಿಂದ ರೂಪಿತ ಗೊಂಡಿರುವುದಿಲ್ಲ. ಕುಟುಂಬದಲ್ಲಿನ ಸಂಬಂಧಗಳ ಸ್ವರೂಪಗಳು ಸಾರ್ವಜನಿಕವಾಗಿ ಚರ್ಚೆಗೆ ಬರದಂತೆ, ಪುರುಷರು, ಹೆಣ್ಣುಮಕ್ಕಳಿಬ್ಬರೂ ಜಾಗ್ರತೆ ವಹಿಸುತ್ತಾರೆ. ಒಮ್ಮೆ ಮದುವೆಯಾದರೆ, ಆಕೆ ತನ್ನ ಗಂಡನೊಂದಿಗಿನ ಸಂಬಂಧವನ್ನು, ಗಂಡನ ಮನೆಯ ಸಂಬಂಧವನ್ನು ಸುಂದರವಾದ ಬಣ್ಣಗಳಿಂದ ತುಂಬಿದೆಯೆಂಬಂತೆ ಆಕೆ ನೀಡಲು ಪ್ರಯತ್ನಿಸುತ್ತಾಳೆ. ತನ್ನ ಕುಟುಂಬದ ಘನತೆ, ಗೌರವವನ್ನು ಕಾಪಾಡುವಲ್ಲಿ ಪ್ರಮುಖ ಸಾಧನವಾಗುತ್ತಾಳೆ. ಇಂತಹ ನಡವಳಿಕೆ, ಮೌಲ್ಯಗಳನ್ನು ಆಕೆ ಅನಿವಾರ್ಯವಾಗಿ ಅಂತರ್ಗತಗೊಳಿಸಿಕೊಳ್ಳುತ್ತಾಳೆ. ಮದುವೆಯಾದ ಬಹುಪಾಲು ಹೆಣ್ಣುಮಕ್ಕಳು ಎಂತಹ ಸಂಕಷ್ಟ ಸಮಯದಲ್ಲೂ ತಮ್ಮ ಕಷ್ಟಗಳನ್ನು ತವರು ಮನೆಯವರ ಗಮನಕ್ಕೆ ಬರದಂತೆ ಕಾಪಾಡುತ್ತಾರೆ. ಹತಾಶೆಯ ತೀವ್ರ ಸ್ಥಿತಿಯಲ್ಲಿ ಆಕೆ ಅಸಹಾಯಕಳೂ, ಏಕಾಂಗಿಯೂ ಆಗುತ್ತಾಳೆ. ಮತ್ತು ತನಗೆ ಬಂದ ಕಷ್ಟ ತನ್ನ ಮಕ್ಕಳಿಗೆ ಬರಬಾರದೆಂಬ ನಿಲುವಿನಿಂದ ಅವುಗಳನ್ನು ಕಟ್ಟಿಕೊಂಡು ಆತ್ಮಹತ್ಯೆಗೆ ಮೊರೆಹೋಗುತ್ತಿದ್ದಾಳೆ.

ಇದು ನಮ್ಮ ಸಮಾಜದ, ಉಸಿರುಗಟ್ಟಿಸುವ ವ್ಯವಸ್ಥೆಯ ವಿರುದ್ಧದ ಅವಳ ಪ್ರತಿಭಟನೆ. ಇಂಥ ಸಮಸ್ಯೆಗಳ ಹಿಂದಿನ ಕಾರ್ಯ-ಕಾರಣ, ಸೂಕ್ತ ಪರಿಹಾರಕ್ಕಾಗಿ ಗಂಭೀರವಾದ ಅಧ್ಯಯನದ ಅಗತ್ಯವಿದೆ. ಕೇವಲ ಅವಳ ಹೊಣೆಗಾರಿಕೆ ಕುರಿತ ಟೀಕೆಗಳಲ್ಲ.

* * *

೨೦೦೨ರಲ್ಲಿ ಗೋಧ್ರಾ ಹತ್ಯಾಕಾಂಡದ ಸಂದರ್ಭದಲ್ಲಿ ಬಿಲ್ಕಿಷ್‌ಬಾನು ಕುಟುಂಬದವರ ಮೇಲೆ ಹಿಂದೂ ಮೂಲಭೂತ ವಾದಿಗಳು ಬರ್ಬರವಾದ ಹಿಂಸೆಯನ್ನು ನಡೆಸಿದ್ದರು. ಆಕೆಯ ಕುಟುಂಬದ ಸದಸ್ಯರನ್ನು ಅಮಾನುಷವಾಗಿ ಕೊಂದಿರುವುದಲ್ಲದೆ, ಆಕೆಯ ಮಗಳನ್ನು ಕಲ್ಲಿನಿಂದ ಜಜ್ಜಿ ಸಾಯಿಸಲಾಗಿತ್ತು. ಐದು ತಿಂಗಳ ಗರ್ಭಿಣಿಯಾಗಿದ್ದ ಬಿಲ್ಕಿಷ್‌ಬಾನಳ ಮೇಲೆ ಸಾಮೂಹಿಕವಾಗಿ ಅತ್ಯಾಚಾರ ನಡೆಸಲಾಗಿತ್ತು.

ಸಾಮಾನ್ಯವಾಗಿ ಎಲ್ಲ ಪ್ರಕರಣಗಳಲ್ಲಿ ನಡೆಯುವಂತೆ ನಡೆದಿದ್ದರೆ, ಈಕೆಗೆ ಖಂಡಿತಾ ನ್ಯಾಯ ಸಿಗುತ್ತಿರಲಿಲ್ಲ. ಗುಜರಾತ್‌ನಲ್ಲಿ ಸರ್ಕಾರ ಹಾಗೂ ಪೋಲಿಸ್ ಇಲಾಖೆ ಎರಡೂ ಷಾಮೀಲಾಗಿರುವ ಸಂಭವ ಹಾಗೂ ಗುಜರಾತ್‌ನಲ್ಲಿ ತನಗೆ ರಕ್ಷಣೆ ಸಿಗಲಾರದೆಂಬ ಸಂದೇಹದ ಆಕೆಯ ಮನವಿಯನ್ನು ಮನ್ನಿಸಿ ಉಚ್ಚ ನ್ಯಾಯಾಲಯ ಈ ವಿಚಾರಣೆಯನ್ನು ಗುಜರಾತಿನಿಂದ ಮಹಾರಾಷ್ಟ್ರಕ್ಕೆ ವರ್ಗಾವಣೆ ಮಾಡಿತು. ಈಗ ನ್ಯಾಯಾಲಯ ಮಹತ್ವದ ತೀರ್ಪನ್ನು ನೀಡಿದೆ. ಈ ತೀರ್ಪಿನ ಪ್ರಕಾರ ಅಪರಾಧಿಗಳಾದ ೧೩ ಜನರು ಜೀವಾವಧಿ ಶಿಕ್ಷೆಯನ್ನು ಅನುಭವಿಸಬೇಕಾಗಿದೆ.

ಗುಜರಾತಿನ ಕೆಲವು ಅಭಿವೃದ್ಧಿ ಮಾದರಿಗಳು ಜನಸಾಮಾನ್ಯರನ್ನು ಮೋಡಿ ಮಾಡಬಹುದು. ಆದರೆ ಮನುಷ್ಯ-ಮನುಷ್ಯರ ನಡುವೆ ಕೋಮುವಾದದ ಬೀಜ ಬಿತ್ತಿ, ಮಹಿಳೆಯರ ಗರ್ಭ ಸೀಳುವಂತಹ, ಸಮೂಹಿಕವಾಗಿ ಅತ್ಯಾಚಾರವೆಸಗುವಂತಹ ಮಾನಸಿಕ ಸ್ಥಿತಿಯನ್ನು ವಾತಾವರಣವನ್ನು ಸೃಷ್ಟಿಸುವುದು ಧರ್ಮದ ಹೆಸರಿನಲ್ಲಿ ನಡೆಯುವ ಪೈಶಾಚಿಕ ಕೃತ್ಯ. ಆರೋಪಿಗಳನ್ನು, ಅಪರಾಧಿಗಳನ್ನು ರಕ್ಷಿಸುವಲ್ಲಿ ಪೋಲಿಸ್ ಇಲಾಖೆ ಸರ್ಕಾರದ ಜೊತೆಗೆ ಕೈ ಜೋಡಿಸಿರುವುದು ಸ್ಪಷ್ಟವಾಗಿದೆ. ಪತ್ರಿಕೆಗಳು, ಸಮಾಜಸೇವಾಕಾರ್ಯಕರ್ತರು, ವಿಶೇಷವಾಗಿ ಲೇಸ್ತಾ ಅಂತಹವರ ಸತತ ಹೋರಾಟದಿಂದಾಗಿ ಬಿಲ್ಕಿಷ್ ಬಾನುಗೆ ಹಾಗೂ ಆಕೆಯ ಕುಟುಂಬಕ್ಕೆ ನ್ಯಾಯ ದೊರೆತಂತಾಗಿದೆ.

ಕನ್ನಡ-ಸಂಸ್ಕೃತಗಳನ್ನು ಚೆನ್ನಾಗಿ ಬಲ್ಲ, ವಿಮರ್ಶೆಯ ಕ್ಷೇತ್ರದಲ್ಲಿ ಅನನ್ಯರೆನ್ನಿಸಿದ, ಕನ್ನಡದಲ್ಲಿ ಸ್ತ್ರೀವಾದಿವಿಮರ್ಶೆಯನ್ನು ಪ್ರಾರಂಭಿಸಿದವರಲ್ಲಿ ಅತಿಮುಖ್ಯರಾದ ಡಾ. ಬಿ.ಎನ್. ಸುಮಿತ್ರಾಬಾಯಿ ಅವರಿಗೆ ಡಾ. ಜಿಎಸ್ಸೆಸ್ ವಿಶ್ವಸ್ಥ ಮಂಡಳಿಯ 'ಡಾ. ಜಿಎಸ್ಸೆಸ್ ಪ್ರಶಸ್ತಿ' ಗೌರವ ಸಂದಿದೆ. ಇದಕ್ಕಾಗಿ ಡಾ. ಸುಮಿತ್ರಾಬಾಯಿ ಅವರಿಗೆ, ಇದೇ ಸಂದರ್ಭದಲ್ಲಿ ಮಾನಸ ಬರಹಗಾರ ಬಳಗದ ಮುಖ್ಯರೂ ಸಹೃದಯ ವಿಮರ್ಶಕಿ, ಪತ್ರಕರ್ತೆಯೂ ಆಗಿರುವ ಸಿ.ಜಿ. ಮಂಜುಳಾ ಅವರಿಗೆ ರಾಜ್ಯದ ಮಾಧ್ಯಮ ಅಕಾಡೆಮಿಯ ಪ್ರಶಸ್ತಿ ಗೌರವ ಸಲ್ಲುತ್ತಿರುವುದು ನಮಗೆ ಸಂತೋಷ ತಂದಿದೆ. ಅವರಿಗೆ ಮತ್ತು ಹಿರಿಯ ಕಾದಂಬರಿಕಾರ್ತಿ ವಿಶಾಲಾಕ್ಷಿ ದಕ್ಷಿಣಾಮೂರ್ತಿ ಅವರಿಗೆ ಸಾಹಿತ್ಯ ಪರಿಷತ್ತು ಪದ್ಮಭೂಷಣ ಬಿ. ಸರೋಜಾದೇವಿ ಶ್ರೀಹರ್ಷ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಅವರಿಗೂ ಮಾನಸ ಬಳಗದ ಅಭಿನಂದನೆಗಳು.

* * *

ಈ ತಿಂಗಳ 'ನಮ್ಮ ಮಾನಸ' ಪತ್ರಿಕೆಯ ಮುದ್ರಣ ಕಾಗದದ ಪ್ರಾಯೋಜಕರಾದ ಬೆಂಗಳೂರು ಕೋ-ಆಪರೇಟಿವ್ ಸೊಸೈಟಿ (ಲಿ.,) ಜಯನಗರ ಇವರಿಗೆ ನಾವು ಆಭಾರಿಯಾಗಿದ್ದೇವೆ.

ಈ ಸಂಚಿಕೆಯಲ್ಲಿ ಪ್ರೊ.. ಎಂ.ಎಚ್. ಕೃಷ್ಣಯ್ಯನವರ ಕಲಾವಿದೆಯರನ್ನು ಕುರಿತ ಲೇಖನಮಾಲೆ ಪ್ರಕಟಿಸಲು ಸಾಧ್ಯಾವಾಗಲಿಲ್ಲ, ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. ಪತ್ರಿಕೆಯನ್ನು ಮೆಚ್ಚಿದವರು, ಸಲಹೆಗಳನ್ನು ಕೊಟ್ಟವರು, ಪ್ರತಿಕ್ರಿಯಿಸಿದವರು ಹಾಗೂ ಉತ್ತಮ ಲೇಖನಗಳನ್ನು ಕೊಟ್ಟು ಸಹಕರಿಸಿದವರು ಇವರೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ. ❑

## 'ಪುಸ್ತಕ ಮನೆ'ಗೆ ಅಭಿನಂದನೆ

ಪುಸ್ತಕ ಮನೆಯ ಜನವರಿ ಸಂಚಿಕೆಯಲ್ಲಿ ಸಂಪೂರ್ಣವಾಗಿ ಬೆಂಗಳೂರು ನಾಗರತ್ನಮ್ಮನವರನ್ನು ಕುರಿತು ಪ್ರಕಟಿಸಿರುವುದು ಸ್ತುತ್ಯರ್ಹವಾಗಿದೆ. ಸಂಗೀತ ವಿದುಷಿಯಾದ, ಅಪಾರ ಜ್ಞಾನಸಂಪತ್ತನ್ನು ಗಳಿಸಿದ, ಸಂಗೀತಕ್ಕಾಗಿ ತನ್ನ ಜೀವನವನ್ನು ಮುಡುಪಿಟ್ಟ, ಮಾನವೀಯ ಮೌಲ್ಯಗಳನ್ನು ಎದೆಯಲ್ಲಿ ತುಂಬಿಕೊಂಡಿದ್ದ ಬೆಂಗಳೂರು ನಾಗರತ್ನಮ್ಮನವರ ಬಗ್ಗೆ ಆಕೆ ಒಬ್ಬ ಕಲಾವಿದೆ ಎಂಬುದಕ್ಕಿಂತ ಹೆಚ್ಚು ತಿಳಿದವರು ಅಪರೂಪ. ಆಕೆಯ ಜೀವನದ ವಿವಿಧ ಮಗ್ಗುಲುಗಳನ್ನು ಇಲ್ಲಿ ಸಂಗ್ರಹಿಸಲಾದ ವಿವಿಧ ಲೇಖನಗಳ ಮೂಲಕ ಕಟ್ಟಿಕೊಡಲಾಗಿದೆ. ಬಹಳ ಹಿಂದೆಯೇ ಪ್ರಕಟವಾಗಿದ್ದ, ಚಿಂತಕರ ಗಮನವನ್ನು ಅಷ್ಟಾಗಿ ಸೆಳೆಯದೇ ಉಳಿದ ಸೂಜಿತಾರೂ ಹಾಗೂ ಕೆ. ಲಲಿತಾ (ಅನುವಾದ, ಹೆಚ್.ಎಸ್. ರಾಘವೇಂದ್ರರಾವ್) ಅವರ "ಚಕ್ರಾಧಿಪತ್ಯ, ರಾಷ್ಟ್ರ ಮತ್ತು ಸಾಹಿತ್ಯದ ಪಥ್ಯ" ಲೇಖನ ಹಲವಾರು ಗಮನೀಯ ಅಂಶಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ಹದಿನೆಂಟನೆಯ ಶತಮಾನದ ತೆಲುಗು ಕವಯಿತ್ರಿ ಮುದ್ದುಪಳನಿಯ 'ರಾಧಿಕಾ ಸಾಂತ್ವನಂ' ಬಗೆಗಿನ ವಿವರ, ಪುರುಷ ಬರಹಗಾರರ ಪ್ರತಿಕ್ರಿಯೆ, ಅಂದಿನ ಸಾಮಾಜಿಕ ರಾಜಕೀಯ ಸಂದರ್ಭ, ಮಹಿಳೆಯರ ಲೈಂಗಿಕ ಅಭಿವ್ಯಕ್ತಿಯ ಬಗೆಗಿನ ಸಾಮಾಜಿಕರ ಧೋರಣೆಯನ್ನು ಸ್ತ್ರೀವಾದಿನೆಲೆಯಿಂದ ವಿಶ್ಲೇಷಿಸಿದೆ ಮತ್ತು ಸೂಕ್ಷ್ಮ ಒಳನೋಟಗಳನ್ನು ನೀಡುತ್ತದೆ. ಬೆಂಗಳೂರು ನಾಗರತ್ನಮ್ಮನವರು 'ಹೆಣ್ಣಿನ ಲೈಂಗಿಕ ಅಭಿವ್ಯಕ್ತಿಯನ್ನು ಚಿತ್ರಿಸುವ' "ರಾಧಿಕಾ ಸಾಂತ್ವನಂ" ಎಂಬ ಮುದ್ದುಪಳನಿಯವರ ಕೃತಿಯನ್ನು ಮರುಮುದ್ರಣ ಮಾಡಿಸುವುದು, ಆ ಕೃತಿಯ ಬಹಿಷ್ಕಾರ ಹಾಗೂ ಅದರ ಸುತ್ತ ನಡೆದ ಚರ್ಚೆಗಳು ಸ್ತ್ರೀಯರ ಅಭಿವ್ಯಕ್ತಿಯನ್ನು ಹತ್ತಿಕ್ಕುವ ಪ್ರಯತ್ನಗಳಾಗಿದ್ದವು ಎಂಬುದರ ಮೇಲೆ ಬೆಳಕು ಚೆಲ್ಲುತ್ತವೆ. ಅಪರೂಪದ, ಅಪಾರ ಪಾಂಡಿತ್ಯವುಳ್ಳ ಬೆಂಗಳೂರು ನಾಗರತ್ನಮ್ಮನವರ ಬಗ್ಗೆ ವಿಸ್ತೃತ ಮಾಹಿತಿಯನ್ನು ನೀಡಿದ ಹರಿಹರಪ್ರಿಯರು ಅಭಿನಂದನಾರ್ಹರು.



# ಮೊದಲ ಪಂಜಾಬಿ ಕಾದಂಬರಿ 'ಸುಂದರಿ'

## ಜೆಂಡರ್ ಹಾಗೂ ಧಾರ್ಮಿಕ ಅಸ್ಮಿತೆಗಳ ರಚನೆ

*ಗುರುಪ್ರೀತ್ ಬಾಲ್*

ಇತಿಹಾಸದುದ್ದಕ್ಕೂ ಕಾಲಧರ್ಮದ ಕೆಲವೊಂದು ಸಾಮಾಜಿಕ ಅಗತ್ಯಗಳನ್ನು ಪೂರೈಸುವುದಕ್ಕಾಗಿ ಸುಧಾರಣಾ ಚಳವಳಿಗಳ ಮೂಲಕ ನೀತಿ ಸಂಹಿತೆ, ಶಿಕ್ಷಣ, ಮೌಲ್ಯಗಳು ಹಾಗೂ ಸಾಹಿತ್ಯದ ಮೂಲಕ ಜೆಂಡರ್ ವಿಚಾರಗಳನ್ನು ರೂಪಿಸಲಾಗಿದೆ, ಪುನರ್‌ರೂಪಿಸಲಾಗಿದೆ. ಸಮುದಾಯವೊಂದನ್ನು ರೂಪಿಸುವಲ್ಲಿ ಜೆಂಡರ್ ನಿರ್ವಚನ ಪ್ರಮುಖ ಅಂಶವಾಗಿಯೇ ಉಳಿದಿದೆ.

ಈ ಲೇಖನದಲ್ಲಿ 1898ರಲ್ಲಿ ಪ್ರಕಟವಾದ ಭಾಯಿ ವೀರ್ ಸಿಂಗ್ ಅವರ ಮೊದಲ ಪಂಜಾಬಿ ಕಾದಂಬರಿ 'ಸುಂದರಿ'ಯಲ್ಲಿ ಜೆಂಡರ್ ಹಾಗೂ ಧಾರ್ಮಿಕ ಅಸ್ಮಿತೆಗಳ ರಚನೆಯನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಈ ಕಾದಂಬರಿಯ ಐತಿಹಾಸಿಕ ಕಾಲಘಟ್ಟ 18ನೇ ಶತಮಾನ. ಆ ಕಾಲದ ಪ್ರತಿಕೂಲ ಪರಿಸ್ಥಿತಿಗಳಲ್ಲಿ ತಮ್ಮಲ್ಲೇ ತಾವು ಒಗ್ಗೂಡಲು ಸಿಖ್ಖರು ಯತ್ನಿಸುತ್ತಿದ್ದಂತಹ ಸಂದರ್ಭ ಅದು. ಸಿಖ್ ಚಳವಳಿಯ ಮುಖ್ಯ ಪಾತ್ರವಾಗಿ ಆದರ್ಶ ಸಿಖ್ ನಾರಿಯಾಗಿ ಸುಂದರಿಯನ್ನು ಲೇಖಕರು ಚಿತ್ರಿಸಿದ್ದಾರೆ. ಸಿಖ್‌ರ ಹೋರಾಟದಲ್ಲಿ ಮಮತಾಮಯಿ, ಸಾಹಸಿ ಹಾಗೂ ಧೈರ್ಯವಂತ ಮಹಿಳೆಯಾಗಿ ರೂಪುಗೊಂಡಿದ್ದಾಳೆ ಆಕೆ.

ಭಾಯಿ ವೀರ್ ಸಿಂಗ್ (1872–1957) ಹಲವು ಕಾದಂಬರಿ, ಮಹಾಕಾವ್ಯ ಹಾಗೂ ಕಥೆಗಳನ್ನು 19ನೇ ಶತಮಾನದ ಉತ್ತರಾರ್ಧ ಹಾಗೂ 20ನೇ ಶತಮಾನದ ಪೂರ್ವಾರ್ಧದಲ್ಲಿ ಬರೆದಿದ್ದಾರೆ. ರಾಣಾ ಸೂರತ್ ಸಿಂಗ್, ಬಿಜಾಯ್ ಸಿಂಗ್, ಸತ್ವಂತ್ ಕೌರ್ ಹಾಗೂ ಸುಂದರಿ – ಈ ನಾಲ್ಕು ಕಾದಂಬರಿಗಳಲ್ಲಿ ಮಹಿಳೆಯ ಪಾತ್ರವೇ ಕೇಂದ್ರಬಿಂದು. ಸಿಖ್ ಇತಿಹಾಸದ 18ನೇ ಶತಮಾನದ ಆ ವೀರಯುಗವನ್ನು ಪುನರ್ ಸೃಷ್ಟಿಸುವ ಆಶಯ ಈ ಕೃತಿಗಳಲ್ಲಿದೆ. ಈ ಕಾದಂಬರಿಗಳ ಮೂಲಕ ಸಾಹಸ, ತಾಳ್ಮೆ ಹಾಗೂ ಮಾನವೀಯ ಘನತೆಯ ಮಾದರಿಗಳನ್ನು ಓದುಗರಿಗೆ ಒದಗಿಸಿಕೊಟ್ಟಿದ್ದಾರೆ. ಇವುಗಳಲ್ಲಿ ಅತಿ ಮುಖ್ಯವಾದ ಕಾದಂಬರಿ ಎಂದರೆ 'ಸುಂದರಿ'. ಇದರಲ್ಲಿ ಮಾಮೂಲಿ ರಕ್ತ ಮಾಂಸದ ಸಾಧಾರಣ ಮಹಿಳೆಯನ್ನು ದೇವತೆಯ ಮಟ್ಟಕ್ಕೆ ಯಶಸ್ವಿಯಾಗಿ ಎತ್ತರಿಸಲಾಗುತ್ತದೆ.

ಸಿಖ್ಖರ ಮೇಲೆ ಮುಘಲ್ ದಾಳಿಯ ಸಂದರ್ಭದ ಕತೆಯನ್ನು ಈ ಕಾದಂಬರಿ ಕಟ್ಟಿಕೊಡುತ್ತದೆ. ಮುಘಲ್ ಹಕೀಮ (ಕಂದಾಯ ಸಂಗ್ರಹಿಸುವಂತಹ ಮುಘಲರ ಸ್ಥಳೀಯ ಮಟ್ಟದ ಅಧಿಕಾರಿ)ರಿಂದ ಅಪಹರಣಕ್ಕೊಳಗಾದ ಸುಂದರಿಯಾದ ನವವಿವಾಹಿತೆ ಹಿಂದೂ ಯುವತಿಯನ್ನು ಕುರಿತಾದ ಜನಪ್ರಿಯ ಜನಪದ ಗೀತೆ ಈ ಕಾದಂಬರಿಗೆ ಆಧಾರ.

ಸುಂದರಿಯ ಕಥೆ ಹಾಗೂ ಸಿಖ್ಖರ ಸ್ಥಿತಿಗತಿಗಳನ್ನು ಪಂಥ್ ಪರ್ಕಾಶ್ (19ನೇ ಶತಮಾನದಲ್ಲಿ ರಚಿತವಾದ ಕೃತಿ), ಖಾಲ್ಸಾ ತವರೀಖ್ ಜೊತೆಗೆ ಹಲವು ಹಿರಿಯ ಪುರುಷ, ಮಹಿಳೆಯರ ಮೌಖಿಕ ಸಂಪ್ರದಾಯದ ಕಥೆಗಳನ್ನು ಆಧರಿಸಿ ಕಟ್ಟಿಕೊಡಲಾಗಿದೆ ಎಂದು ಲೇಖಕರೇ ಹೇಳಿಕೊಂಡಿದ್ದಾರೆ.

1849ರಲ್ಲಿ ಬ್ರಿಟಿಷರಿಗೆ ಸೋತ ಅನಂತರ ಸಿಖ್ ಸಮುದಾಯ ಕಷ್ಟಕಾಲವನ್ನೆದುರಿಸುತ್ತಿತ್ತು. ಆಂತರಿಕ ಸಂಘರ್ಷಗಳಿದ್ದವು. ಅವರ ಧಾರ್ಮಿಕ ಆಚರಣೆಗಳು ಇತರ ಧರ್ಮಗಳ ಆಚರಣೆಗಳ ಜೊತೆ ಅದೂ ವಿಶೇಷವಾಗಿ ಹಿಂದೂಗಳ ಆಚರಣೆಗಳ ಜೊತೆಗೆ ಬೆರೆತುಹೋಗಿತ್ತು. ಸುಂದರಿಯ ಮುಖ್ಯ ಉದ್ದೇಶ ಶುದ್ಧವಾದ ಧಾರ್ಮಿಕ ಸಿಖ್ ಅಸ್ಮಿತೆಯನ್ನು ಸೃಷ್ಟಿಸುವುದಾಗಿತ್ತು. ಆ ಮೂಲಕ

ಸಿಖ್‌ವಾದವನ್ನು ಬಲಪಡಿಸುವುದಲ್ಲದೆ ಲಿಂಗ ಹಾಗೂ ಮತ್ತಿತರ ಧಾರ್ಮಿಕ ಅಸ್ಮಿತೆಗಳನ್ನೂ ರಚಿಸಿಕೊಡುವುದಾಗಿತ್ತು. ಇಂತಹ ಬರಹಗಳ ಮುಖಾಂತರ ಖಾಲ್ಸಾ ದಿವಾಣ್ ಹಾಗೂ ಸಿಂಗ್ ಸಭಾ ಸುಧಾರಣಾ ಚಳವಳಿಗಳು ಉದಯವಾಗಿ ಈ ದಿಕ್ಕಿನಲ್ಲಿ ಕಾರ್ಯ ನಿರ್ವಹಿಸಿದವು.

ಈ ಗುರಿ ಸಾಧನೆಗಾಗಿ ಲೇಖಕರು ಕಾಲ-ಸ್ಥಳದಿಂದ ದೂರ ಸಾಗಿದ್ದಾರೆ. ಬಂಡಾ ಬಹಾದೂರ್ ಅವರ ಸಾವಿನ ಸ್ವಲ್ಪ ಸಮಯದ ನಂತರದ ಕಾಲ. ಅಂದರೆ 1716 ಹಾಗೂ 1757ರ ನಡುವಿನ ಕಾಲವದು. ಇದು ಸಿಖ್ಖರಿಗೆ ಕಿರುಕುಳವಾಗುತ್ತಿದ್ದಂತಹ ಕಾಲ. ಧರ್ಮ, ಅಸ್ಮಿತೆಯ ಸಲುವಾಗಿ ಸಾವಿರಾರು ಸಿಖ್ಖರು ಜೀವ ಬಲಿದಾನ ನೀಡಿದ ಸಂದರ್ಭ ಅದು. ಒಂದೆಡೆ ಸಿಖ್ಖರು, ಮತ್ತೊಂದೆಡೆ ಮುಘಲರು ಹಾಗೂ ಆಫ್ಘನ್ನರ ಸಂಘರ್ಷ ನಡೆಯುತ್ತಿದ್ದ ಕಾಲ. ಬಾಂಡಾ ಬಹದ್ದೂರ್ ಅವರ ಹತ್ಯೆಯ ನಂತರ ಮೊದಲ ಐದು ವರ್ಷಗಳಲ್ಲಿ ಸಿಖ್ಖರ ಬಗ್ಗೆ ಹೆಚ್ಚೇನೂ ತಿಳಿದಿಲ್ಲ. ಸಿಖ್ಖರ ಮಧ್ಯೆ ಸಣ್ಣ ಸಣ್ಣ ವಿಚಾರಗಳೂ ಮುಖ್ಯವಾದವು. ಅಮೃತಸರದಲ್ಲಿ ಹರಿಮಂದಿರ್ ಸಾಹಿಬ್ ಮೇಲೆ ನಿಯಂತ್ರಣ ಸಾಧಿಸುವುದಕ್ಕಾಗಿ ಜಗಳಕ್ಕೆ, ನೇರಸಂಘರ್ಷಗಳಿಗೆ ನಾಂದಿಯಾದವು.

1721ರಲ್ಲಿ ಮಾತಾ ಸುಂದರಿ (ಗುರು ಗೋವಿಂದ್ ಸಿಂಗ್‌ನ ವಿಧವೆ) ಅವರು ಭಾಯಿ ಮಣಿ ಸಿಂಗ್ ಅವರನ್ನು ಹರಿಮಂದಿರ್ ಸಾಹಿಬ್ ಮುಖ್ಯ ಅರ್ಚಕರಾಗಿ ನೇಮಿಸಿದರು. ಆ ಮೂಲಕ ಆಂತರಿಕ ಸಂಘರ್ಷಕ್ಕೆ ತಡೆ ಹಾಕಿದರು. ಅಮೃತಸರದಲ್ಲಿ ಎರಡು ವರ್ಷಗಳಿಗೊಮ್ಮೆ ನಡೆಯುವ 'ಸರ್ಬತ್ ಖಾಲ್ಸಾ' ಎಂದು ಕರೆಯಲಾಗುವ ಸಭೆಗಳಲ್ಲಿ ಸಮುದಾಯದ ವಿಚಾರಗಳನ್ನು ನಿರ್ಧರಿಸುವ ಪರಂಪರೆಯನ್ನು ಆರಂಭಿಸಿದರು. ಸರ್ಬತ್ ಖಾಲ್ಸಾ 'ಜಾತೇದಾರ್'ಗಳನ್ನು ನೇಮಕ ಮಾಡುತ್ತಿತ್ತು. ಸಿಖ್ಖರ ಪರವಾಗಿ ಸಂಧಾನ ನಡೆಸುವ ಅಧಿಕಾರ ಇವರಿಗೆ ಇರುತ್ತಿತ್ತು. ಈ ಜಾತೇದಾರ್‌ಗಳು ದೇಶಭ್ರಷ್ಟರಾದವರ ಚಿಕ್ಕ ಚಿಕ್ಕ ಗುಂಪುಗಳನ್ನು ಮಾಡಿತು. ಅಲ್ಲದೆ ಸಮೀಪದ ಗ್ರಾಮಗಳನ್ನು ತಮ್ಮ ಸಂರಕ್ಷಣೆಗೆ ತೆಗೆದುಕೊಳ್ಳಲಾರಂಭಿಸಿದರು. ಈ ಕಾದಂಬರಿಯಲ್ಲಿ ಇಂತಹ ಒಂದು ಬಹಿಷ್ಕೃತ ಸಿಖ್ಖರ ಗುಂಪಿನೊಳಗೆ ಸುಂದರಿಯೂ ಒಬ್ಬಳಾಗುತ್ತಾಳೆ. ಈ ಗುಂಪು ಶಾಮ್ ಸಿಂಗ್ ನೇತೃತ್ವದಲ್ಲಿ ರಾಜ್ಯದ ವಿವಿಧ ಭಾಗಗಳಲ್ಲಿ ಕಾರ್ಯಾಚರಣೆ ನಡೆಸುತ್ತಿರುತ್ತದೆ.

1726ರಲ್ಲಿ ಲಾಹೋರಿನ ಗವರ್ನರ್ ಆದ ಝಕಾರ್ಯಾ ಖಾನ್ ಸಿಖ್ ಜನಾಂಗದ ಮೇಲೆ ಕ್ರೂರವಾದ ದೌರ್ಜನ್ಯವನ್ನು ಎಸಗುತ್ತಾನೆ. ಝಕಾರ್ಯಖಾನ್‌ನ ಮರಣದ ಅನಂತರವೂ ಇದು ಮುಂದುವರಿಯುತ್ತದೆ. ಕಾಲವನ್ನು ಇತಿಹಾಸದಲ್ಲಿ ಮೊದಲ ಜನಾಂಗೀಯ ಹತ್ಯೆ (ಹಾಲೊಕಾಸ್ಟ್ 1746)ಯ ಕಾಲ ಎಂದು ಕರೆಯಲಾಗುತ್ತದೆ. ಈ ಯುದ್ಧದ ಸುತ್ತಲೇ ಸುಂದರಿಯ ಕಥಾವಸ್ತು ರೂಪತಳೆದಿದೆ,

ಲಾಹೋರ್ ಗವರ್ನರ್ ಮೀರ್ ಮನ್ನು (1748-53) ಕಾಲವನ್ನು ಸಿಖ್ಖರ ಇತಿಹಾಸ ಕಾಲದಲ್ಲಿ ಅತ್ಯಂತ ಕರಾಳ ಅಧ್ಯಾಯ ಎಂದು ಭಾವಿಸಲಾಗುತ್ತದೆ. ಈ ಕಾಲದಲ್ಲಿ ಸಿಖ್ ಮಹಿಳೆಯರು ಹಾಗೂ ಮಕ್ಕಳನ್ನೂ ಬಿಡಲಿಲ್ಲ. ಮಹಿಳೆಯರನ್ನು ಬಂಧಿಸಿ, ಉಪವಾಸ ಕೆಡವಿ, ಕಿರುಕುಳ ನೀಡಿ ಸಾಯಿಸಲಾಗುತ್ತಿತ್ತು. ಇಂತಹ ಬಿಕ್ಕಟ್ಟಿನ ಸಂದರ್ಭದಲ್ಲೂ ಸಿಖ್ಖರು ಎಂದೂ ನೈತಿಕ ಮೌಲ್ಯಗಳನ್ನು ಕಳೆದುಕೊಳ್ಳಲಿಲ್ಲ. ಜೀವ ಉಳಿಸಿಕೊಳ್ಳಲು ಧರ್ಮವನ್ನು ಕೈ

*ಒಂದು ಧರ್ಮದ ಉತ್ತುಂಗ ಸ್ಥಿತಿ ಹಾಗೂ ಧರ್ಮದ ವಿನಾಶದ ಸ್ಥಿತಿ ಎರಡೂ ಹಂತದಲ್ಲಿ ಸಾಮಾನ್ಯವಾಗಿ 'ಸ್ತ್ರೀ'ಯನ್ನು ಒಂದು ಅಸ್ತ್ರವಾಗಿ ಬಳಸುವುದು ಜಗತ್ತಿನ ಬಹಳಷ್ಟು ಧರ್ಮಗಳಲ್ಲಿ ಕಂಡುಬರುತ್ತದೆ. ಧರ್ಮದ ಉಳಿವು ಅಥವಾ ಅಳಿವು ಆಯಾ ಧರ್ಮದ ಸ್ತ್ರೀಯರ ಕುಟುಂಬದಲ್ಲಿ ಹಾಗೂ ಸಮಾಜದಲ್ಲಿನ ಆಕೆಯ ಸ್ಥಾನಮಾನವನ್ನು ಕುರಿತು ಮಾತನಾಡುತ್ತದೆ. ಇದು ಆಯಾ ಧರ್ಮದ ಪೂರುಷರ ನಿರ್ದೇಶನವನ್ನು ಅವಲಂಬಿಸಿದೆ. ಇದು ಪುರುಷತ್ವದ ಪರಮಾಧಿಕಾರದ ಅಭಿವ್ಯಕ್ತಿ. ಒಂದು ಧರ್ಮದ ವಿಜೃಂಭಣೆ ಹಾಗೂ ವಿನಾಶವೆಂದರೆ ಸ್ತ್ರೀಯರ ಮೇಲೆ ಹೇರುವ ಸಂಪೂರ್ಣ ನಿರ್ಬಂಧ ಹಾಗೂ ಸಂಪೂರ್ಣ ನಿರಾಕರಣೆ.*

*ಈ ಹಿನ್ನೆಲೆಯಲ್ಲಿ ಪಂಜಾಬಿ ಭಾಷೆಯ ಪ್ರಥಮ ಕಾದಂಬರಿ 'ಸುಂದರಿ' ಮುಖ್ಯವಾಗುತ್ತದೆ. ೧೮ನೇ ಶತಮಾನದಲ್ಲಿ ಸಿಖ್ ಧರ್ಮ ಹೊರಗಿನ ಆಕ್ರಮಣದಿಂದಾಗಿ ಸಂಪೂರ್ಣವಾಗಿ ಕೊಚ್ಚಿಹೋಗುವ ಸಂಕಷ್ಟ ಸ್ಥಿತಿಯಲ್ಲಿತ್ತು. ವಿನಾಶದ ಅಂಚಿಗೆ ಹೋಗುತ್ತಿದ್ದ ಸಿಖ್ ಧರ್ಮವನ್ನು ಸಂಘಟಿಸುವುದು ಹಾಗೂ ಕ್ರೋಡೀಕರಿಸುವುದು ಅನಿವಾರ್ಯವಾಗಿತ್ತು.*

*ಭಾರತೀಯ ಸಾಂಪ್ರದಾಯಿಕ ಸಮಾಜದ ಮೇಲೆ ಪಾಶ್ಚಾತ್ಯರ ಪ್ರಭಾವ ಗಾಢವಾಗಿ ಬೀರುತ್ತಿದ್ದ ಕಾಲವದು. ಸತಿಪದ್ಧತಿ, ಬಾಲ್ಯವಿವಾಹ, ಬಹುಪತ್ನಿತ್ವ, ಜಾತಿಪದ್ಧತಿ ಮುಂತಾದ ಸಾಮಾಜಿಕವಾಗಿ ಅನಿಷ್ಟಕರ ಪದ್ಧತಿಗಳನ್ನು ವಿರೋಧಿಸುವ ಪ್ರಯತ್ನದ ಮೂಲಕ ಸಾಮಾಜಿಕ ಬದಲಾವಣೆಯ ಪರಿವರ್ತನೆಯ ಗಾಳಿ ಬೀಸುತ್ತಿತ್ತು. ಮಹಿಳೆಯರ ಸ್ಥಾನಮಾನದ ಸುಧಾರಣೆಗಾಗಿ ಪ್ರಯತ್ನಗಳು ನಡೆಯುತ್ತಿದ್ದವು. ಇನ್ನೊಂದು ಕಡೆ ಕ್ರಿಶ್ಚಿಯನ್ ಮಿಷನರಿಗಳು ಸಹ ಭಾರತದ ಮಹಿಳೆಯರ ಶೋಷಣೆಯನ್ನು ಕುರಿತು ಕಿರು ಪ್ರಕಟಣೆಗಳನ್ನು ಪ್ರಕಟಿಸುತ್ತಿದ್ದವು. ಈ ಹಿನ್ನೆಲೆಯಲ್ಲಿ ಕ್ರಿಶ್ಚಿಯನ್, ಇಸ್ಲಾಂ ಹಾಗೂ ಹಿಂದೂ ಧರ್ಮಗಳು 'ಸ್ತ್ರೀ'ಯನ್ನು ಚಿತ್ರಿಸುವುದಕ್ಕಿಂತ ಭಿನ್ನವಾಗಿ ಸಿಖ್ ಧರ್ಮದ 'ಸ್ತ್ರೀ'ಯರನ್ನು ಚಿತ್ರಿಸುವುದು ಧರ್ಮದ ಕ್ರೋಡೀಕರಣದ ದೃಷ್ಟಿಯಿಂದ ಅತ್ಯಗತ್ಯವಾಗಿತ್ತು. ಹಾಗಾಗಿ, ಪುರುಷನಿಗೆ ಸರಿಸಮಾನವಾದ ಮಾದರಿ 'ಸ್ತ್ರೀ'ಯು ಆಕೆಯ ಶೌರ್ಯ, ಧೀಮಂತಿಕೆ ಹಾಗೂ ಸಾಹಸಮಯ ವ್ಯಕ್ತಿತ್ವದ ಮೂಲಕ ಧರ್ಮದ ಕ್ರೋಡೀಕರಣ ಹಾಗೂ ಭಿನ್ನತೆಯನ್ನು ವ್ಯಕ್ತಪಡಿಸುವುದು ಲೇಖಕರಿಗೆ ಮುಖ್ಯವಾಗಿತ್ತು. ಇತರ ಧರ್ಮಗಳ ಹೋಲಿಕೆಯ ಹಿನ್ನೆಲೆಯಲ್ಲಿ ಸಿಖ್ ಮಹಿಳೆಯ ಸ್ಥಾನವನ್ನು ವಿಜೃಂಭಿಸುವುದರ ಮೂಲಕ ಆಕೆಗೆ ಒಂದು ವಿಶಿಷ್ಟ ಸ್ಥಾನವನ್ನು ನೀಡಲಾಯಿತು. ಈ ಸಾಮಾಜಿಕ ಹಿನ್ನೆಲೆಯಲ್ಲಿ 'ಸುಂದರಿ'ಯ ಓದು ಮುಖ್ಯವಾಗುತ್ತದೆ. ಪಂಜಾಬಿಗಳ ಬದುಕಿನಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಪ್ರಭಾವ ಬೀರಿರುವ, ಬೀರುತ್ತಿರುವ ಕೃತಿ 'ಸುಂದರಿ'. 19ನೇ ಶತಮಾನದ ಉತ್ತರಾರ್ಧದಲ್ಲಿ ರಚಿತವಾಗಿದ್ದು, 18ನೇ ಶತಮಾನದ ಕಾಲಘಟ್ಟವನ್ನು ಅನಾವರಣಗೊಳಿಸುತ್ತದೆ. ಚಿಕ್ಕ ಮಕ್ಕಳಿಗೆ ಜೋಗುಳದ ಕಥೆಯಾಗಿ. ಗಂಭೀರ ಸಾಹಿತ್ಯಕ ಕೃತಿಯಾಗಿ 'ಸುಂದರಿ'ಯ ಕಥಾನಕ ಮಾನ್ಯತೆ ಪಡೆದಿದೆ.*

*- ಸಂ.*

ಬಿಟ್ಟಂತಹ ಉದಾಹರಣೆಗಳೂ ಇಲ್ಲ. ಸುಂದರಿಯ ಕಥಾನಕದ ಮೂಲಕ, ಜೀವಕ್ಕೇ ಕುತ್ತು ಬಂದರೂ ತಮ್ಮ ಧರ್ಮ ಹಾಗೂ ಆಚರಣೆಗಳನ್ನು ಉಳಿಸಿಕೊಂಡು ವಿಜಯಶಾಲಿಗಳಾಗಿ ಹೊರಹೊಮ್ಮಿದ ಆ ಕಾಲವನ್ನು ಲೇಖಕರು ನೆನಪಿಸಲು ಪ್ರಯತ್ನಿಸಿದ್ದಾರೆ. 18ನೇ ಶತಮಾನದ ಈ ಮಾದರಿಯನ್ನೇ 19ನೇ ಶತಮಾನದ ಉತ್ತರಾರ್ಧ ಹಾಗೂ 20ನೇ ಶತಮಾನದ ಆರಂಭದಲ್ಲೂ ಸಿಖ್ ಧರ್ಮ ಬಿಕ್ಕಟ್ಟುಗಳಿಗೆ ತುತ್ತಾಗುತ್ತಿದ್ದ ಸಂದರ್ಭದಲ್ಲಿ ಸ್ಫೂರ್ತಿ ತುಂಬಲು ಬಳಸಲಾಯಿತು.

'ಸುಂದರಿ' ಸಾಮಾಜಿಕ ಹಾಗೂ ಸಾಹಿತ್ಯಕ ಪ್ರಕ್ರಿಯೆ. ಇದರ ಬರವಣಿಗೆಯ ಹಿಂದಿನ ಪ್ರೇರಣೆ ಸುಧಾರಣಾವಾದಿಯದು. ಇದು 19ನೇ ಶತಮಾನದ ಭೀತಿ ಹಾಗೂ ಆಶಯಗಳ ಉತ್ಪನ್ನವೆನ್ನಲಾಗುತ್ತದೆ. ಈ ಭೀತಿ ಎಂತಹದೆಂದರೆ ಸಿಖ್ ಧಾರ್ಮಿಕ ಸಂಸ್ಥೆಗಳು ಹಾಗೂ ಸಮಾಜವನ್ನಾವರಿಸಿದ ಭ್ರಷ್ಟಾಚಾರ ಹಾಗೂ ಅವನತಿಯ ವಿರುದ್ಧ ಪರಿಹಾರ ಕ್ರಮಗಳನ್ನು ಕೈಗೊಳ್ಳದಿದ್ದಲ್ಲಿ ಸಿಖ್ ಧರ್ಮ ಸಾಯಬಹುದು ಎಂಬಂತಹದ್ದು. ಆಶಯ ಎಂದರೆ ಸಿಖ್‌ವಾದ ತನ್ನ ತಾತ್ವಿಕತೆಯಿಂದ ಹೆಮ್ಮೆಯ ಸ್ಥಾನ ಗಳಿಸಿಕೊಳ್ಳುವುದು.

**ಜೆಂಡರ್ ರಚನೆ**

ಎರಡು ಲಿಂಗಗಳ ಮಧ್ಯೆ ಅಸ್ತಿತ್ವದಲ್ಲಿ ಇರುವ ಅಸಮಾನ ಸಂಬಂಧದ ವ್ಯಾಖ್ಯಾನ, ಬಿಂಬಿಸುವಿಕೆ ಹಾಗೂ ಸಮರ್ಥಿಸಿಕೊಳ್ಳುವ ಪ್ರಕ್ರಿಯೆಯೇ ಸಾಮಾಜಿಕವಾಗಿ ಜೆಂಡರ್ ಅನ್ನು ನಿರ್ವಚನಗೊಳಿಸುವುದಾಗಿರುತ್ತದೆ. ಜೊತೆಗೇ ಇದರೊಳಗೇ ವಿರುದ್ಧಾತ್ಮಕ ಪ್ರಕ್ರಿಯೆಯೂ ಒಳಗೊಂಡಿರಬಹುದು. ಎಂದರೆ ಭಿನ್ನ ಲಿಂಗಿಗಳ ಮಧ್ಯದ ಅಸಮಾನ ಸಂಬಂಧಗಳು ತಾತ್ವಿಕತೆಯ ಚೌಕಟ್ಟಿನ ಸೃಷ್ಟಿಯೊಳಗಿನ ಸಂಕೀರ್ಣ ಪ್ರಕ್ರಿಯೆಯ ಮೂಲಕ ಸಮಾನತೆಯ ಸಿದ್ಧಾಂತದೊಳಗೆ ಮರೆಯಾಗಿರಬಹುದು. ಹೀಗಾಗಿ ಜೆಂಡರ್ ಎಂಬುದು ಸಾಮಾಜಿಕವಾಗಿ ರಚಿತವಾದ ಅರ್ಥಗಳನ್ನು ಬೇರೆ ಬೇರೆ ರೀತಿಗಳಲ್ಲಿ ಧ್ವನಿಸುತ್ತದೆ. ಹಲವು ಕಾಲಘಟ್ಟಗಳಲ್ಲ ಸಮಾಜದಿಂದ ಸಮಾಜಕ್ಕೆ ಪುರುಷ ಮಹಿಳೆಯರ ಪಾತ್ರ ಬದಲಾಗುತ್ತಾ ಸಾಗುವುದರಿಂದ ಅರ್ಥ ವ್ಯಾಖ್ಯಾನಗಳೂ ಬದಲಾಗುತ್ತಾ ಜೆಂಡರ್ ಎಂಬುದು ಚಲನಾತ್ಮಕವಾದ ವರ್ಗವಾಗುತ್ತದೆ. ಆದರೂ ಮಹಿಳೆಯ ಮೇಲೆ ಅಧಿಕಾರ ಸ್ಥಾಪಿಸುವ ಪುರುಷರ ಪರವಾದ ಜೆಂಡರ್ ವ್ಯತ್ಯಾಸಗಳನ್ನು ಇರಿಸಿಕೊಳ್ಳಲು, ಕಾಪಾಡಿಕೊಳ್ಳಲು ಸಮಾಜಗಳು ಯಾವಾಗಲೂ ಬಯಸುತ್ತವೆ. ಸಾಮಾಜೀಕರಣ, ಸಾಮಾಜಿಕ ಸಂಸ್ಥೆಗಳ ಕ್ರಿಯೆಗಳು ಹಾಗೂ ಜನರ ನಡುವಣ ಸಂಪರ್ಕಗಳು ಇತ್ಯಾದಿ ವಿವಿಧ ಸಾಮಾಜಿಕ ಪ್ರಕ್ರಿಯೆಗಳ ಮೂಲಕ ಇದನ್ನು ಜೀವಂತವಾಗಿರಿಸಲು ಯತ್ನಿಸುತ್ತವೆ.

ಭಾರತೀಯ ಮನೆಗಳು ಹಾಗೂ ಕುಟುಂಬಗಳೊಳಗೆ ಅಷ್ಟರಲ್ಲಾಗಲೇ ಪಾಶ್ಚಾತ್ಯ ಮೌಲ್ಯಗಳು ಪ್ರಭಾವ ಬೀರತೊಡಗಿದ್ದ ಸಂದರ್ಭದಲ್ಲಿ ಭಾಯಿ ವೀರ್ ಸಿಂಗ್ ಮಹಿಳಾ ಪ್ರಶ್ನೆಯನ್ನು ಏಕೆ ಕೈಗೆತ್ತಿಕೊಂಡರು ಎಂಬ ಪ್ರಶ್ನೆ ಏಳುತ್ತದೆ. ಈ ಸಂದರ್ಭದಲ್ಲಿ ಅವರು ಯಾಕೆ ಪರಂಪರೆಯ ಮೊರೆ ಹೊಕ್ಕರು? ಆಗ ಅಸ್ತಿತ್ವದಲ್ಲಿದ್ದ ಸತಿ, ಬಹು ಪತ್ನಿತ್ವ ಹಾಗೂ ಬಾಲ್ಯ ವಿವಾಹ ಪದ್ಧತಿಗಳಂತಹ ಸಾಮಾಜಿಕ ಪಿಡುಗುಗಳ ವಿರುದ್ಧ ಸಮಾಜ ಸುಧಾರಕರು ಸಕ್ರಿಯವಾಗಿ ಕಾರ್ಯ ನಿರ್ವಹಿಸುತ್ತಿದ್ದರು. ರಾಜಕೀಯ ಕ್ಷೇತ್ರದಲ್ಲಿ ಮಹಿಳಾ ಪ್ರಶ್ನೆಯನ್ನೊಳಗೊಳ್ಳದ ರಾಷ್ಟ್ರೀಯವಾದಿ ಸಿದ್ಧಾಂತವೂ ರೂಪುಗೊಂಡಿತ್ತು. ರಾಷ್ಟ್ರೀಯವಾದಿ ರಾಜಕೀಯ ಭಾರತದ ಹಿಂದಿನದನ್ನೆಲ್ಲಾ ವೈಭವೀಕರಿಸುತ್ತಿತ್ತು. ಪರಂಪರೆಯ ಎಲ್ಲವನ್ನೂ ಸಮರ್ಥಿಸುವ ನಿಲುವು ತಾಳುತ್ತಿತ್ತು. ಸಾಮಾಜಿಕ ನಂಬಿಕೆಗಳು ಹಾಗೂ ಆಚರಣೆಗಳ ಬಗ್ಗೆ ಸಂಪ್ರದಾಯವಾದಿ ದೃಷ್ಟಿಯನ್ನು ಪೋಷಿಸಿಕೊಂಡು ಬಂತು. ಹೀಗಾಗಿ ಜೆಂಡರ್ ಎಂಬುದನ್ನು ಭಾರತೀಯ ಸಂಸ್ಕೃತಿ ಹಾಗೂ ಪರಂಪರೆಯ ಪ್ರತಿನಿಧಿಯೆಂಬಂತೆ ನಿರ್ವಚನ ಗೊಳಿಸಲಾಯಿತು. ಪಾಶ್ಚಾತ್ಯ ಆಧುನಿಕ ಪ್ರಭಾವಗಳಿಗೆ ಒಳಗಾಗದಂತೆ ಮಾಡಲು ಮಹಿಳೆಯರನ್ನು ಮನೆಯ ನಾಲ್ಕು ಗೋಡೆಗಳ ಮಧ್ಯೆ ರಕ್ಷಿಸಬೇಕು, ಬಂಗಾಳದಲ್ಲಿ 19ನೇ ಶತಮಾನದ ಆರಂಭ ಹಾಗೂ ಮಧ್ಯ ಭಾಗದಲ್ಲಿ ಸಾಮಾಜಿಕ ಸುಧಾರಣೆಗಳನ್ನು ಕುರಿತಾದ ವಿವಾದಾತ್ಮಕ ಚರ್ಚೆಗಳಲ್ಲೆಲ್ಲಾ ಮಹಿಳಾ ವಿಚಾರವೇ ಪ್ರಧಾನವಾದುದಾಗಿತ್ತು ಎಂದು ಚಟರ್ಜಿ ಅಭಿಪ್ರಾಯ ಪಡುತ್ತಾರೆ. ಆದರೆ ರಾಷ್ಟ್ರೀಯವಾದಿ ಚರ್ಚೆಯ ಅವಧಿಯಲ್ಲಿ ಇದಕ್ಕೆ ಹಿನ್ನಡೆಯಾಯಿತು.

ರಾಷ್ಟ್ರೀಯವಾದಿ ಸಿದ್ಧಾಂತವು ಸಾಮಾಜಿಕ ನಂಬಿಕೆಗಳು ಹಾಗೂ ಆಚರಣೆಗಳತ್ತ ಸಾಂಪ್ರದಾಯಿಕ ದೃಷ್ಟಿಕೋನವನ್ನು ಬೆಳೆಸಿತು. ಭಾಯಿ ವೀರ್ ಸಿಂಗ್ ಧಾರ್ಮಿಕ, ಚಾರಿತ್ರಿಕ ಸಂದರ್ಭದಲ್ಲಿ ಜೆಂಡರ್ ಅನ್ನು ನಿರಚನ ಗೊಳಿಸುತ್ತಾರೆ. ಪಾಶ್ಚಾತ್ಯ ಶಕ್ತಿಗಳು ಮಾತ್ರವಲ್ಲದೆ ಇತರ ಧಾರ್ಮಿಕ ಸಮುದಾಯಗಳಿಂದಲೂ ಸಮುದಾಯದೊಳಗೇ ಸಿಖ್ ಬೌದ್ಧಿಕ ನಾಯಕತ್ವದ ಬಿಕ್ಕಟ್ಟನ್ನು ಕಂಡುಕೊಳ್ಳುವ ಯತ್ನ ಇದು.ಈ ಪ್ರಕ್ರಿಯೆಯಲ್ಲಿ ಅವರು ಜೆಂಡರ್ ಅನ್ನು ಲೌಕಿಕ ಅಲೌಕಿಕ ನೆಲೆಗಳಲ್ಲಿ ಬುಡಮೇಲು ಗೊಳಿಸುತ್ತಾರೆ.

ಭಾಯಿ ವೀರ್ ಸಿಂಗ್‌ಅವರ 'ಸುಂದರಿ'ಯ ರಚನೆಯನ್ನು ಕ್ರೈಸ್ತ ಮಿಷನರಿಗಳ ಬರಹಗಳಿಗೆ ಪ್ರತಿಕ್ರಿಯಾತ್ಮಕ ರೂಪುಗೊಳ್ಳುವಿಕೆ ಎಂದೂ ಪರಿಗಣಿಸಲಾಗುತ್ತದೆ. ಅದರಲ್ಲೂ ಮೊದಲ ಪಂಜಾಬಿ (ಅನುವಾದಿತ) ಕಾದಂಬರಿ ಜ್ಯೋತಿರುಡೆ ಯಲ್ಲಿ ಭಾರತೀಯ ಮಹಿಳೆಯ ಸ್ಥಿತಿಗತಿಯನ್ನು ಯೂರೋಪಿಯನ್ ಮಹಿಳೆಯರಿಗೆ ಹೋಲಿಸಿದಲ್ಲಿ ಅತ್ಯಂತ ಹೀನವಾಗಿ ಚಿತ್ರಿಸಲಾಗಿದೆ. ಜೊತೆಗೆ ಲಿಂಗ ಅಸಮಾನತೆಗಳನ್ನೂ ಎತ್ತಿ ಹೇಳಲಾಗಿದೆ.

ಯೂರೋಪಿಯನ್ ಮಹಿಳೆಯನ್ನು ಸೌಂದರ್ಯದ ಮಾದರಿಯಾಗಿ ಬಿಂಬಿಸಲಾಗಿದೆ. ಇದಕ್ಕೆ ಪ್ರತಿಯಾಗಿ ಸುಂದರಿ ಚಂದ್ರ ನಕ್ಷತ್ರಗಳಿಗಿಂತ ಸುಂದರಿ ಎಂದು ಬಣ್ಣಿಸಲಾಗಿದೆ. ನಿರ್ದಿಷ್ಟವಾಗಿ ಹಿಂದೂ ಮಹಿಳೆಯರ ಸೌಂದರ್ಯವನ್ನೂ ಎತ್ತಿ ಹೇಳಲಾಗಿದೆ.

ಸುಂದರಿ ಮುಖ್ಯ ಪಾತ್ರದ ಮೂಲಕ ನಮ್ಮ ಸಮಾಜದಲ್ಲಿ ಮಹಿಳೆ, ಪುರುಷರ ಮಧ್ಯೆ ಇರುವ ಸಮಾನತೆಯನ್ನು ಲೇಖಕರು ತೋರಿಸುತ್ತಾರೆ. ಮಧ್ಯ ಯುಗದಲ್ಲೂ ನಮ್ಮ ಮಹಿಳೆಯರು ತಮ್ಮ ನಿರ್ಧಾರಗಳನ್ನು ತಾವೇ ತೆಗೆದುಕೊಳ್ಳುತ್ತಿದ್ದರು. ಕುಟುಂಬ ಜೀವನವನ್ನು ತೊರೆದು ಸಿಖ್ ಬ್ರಿಗೇಡ್‌ಗೆ ಸೇರಿಕೊಳ್ಳಲು ಸುಂದರಿ ನಿರ್ಧರಿ ಸುತ್ತಾಳೆ ಎಂದು ಲೇಖಕರು ಚಿತ್ರಿಸುತ್ತಾರೆ. ಹೋರಾಟಗಳಲ್ಲೂ ಆಕೆ ಭಾಗಿಯಾಗುತ್ತಾಳೆ. ಪುರುಷರ ಜೊತೆಗೆ ಯುದ್ಧ ಭೂಮಿಗಳಲ್ಲೂ ಸೆಣಸುತ್ತಾಳೆ.

ಸಿಂಗ್ ಸಭಾ ಚಳವಳಿ ಮಹಿಳೆಯ ವಿಮೋಚನೆಯತ್ತ ಕೆಲಸ ಮಾಡಿತು. ಸಾಹಿತ್ಯದ ಮೂಲಕ ವಿವಿಧ ಮಹಿಳಾ ಮಾದರಿಗಳನ್ನು ರೂಪಿಸಲಾಯಿತು. ಈ ಹಿಂದೆಯೇ ಹೇಳಿದಂತೆ ಭಾಯಿ ವೀರ್ ಸಿಂಗ್ ಮಹಿಳಾ ಪಾತ್ರಗಳನ್ನು ಕೇಂದ್ರವಾಗಿರಿಸಿಕೊಂಡ ಹಲವು ಕಾದಂಬರಿಗಳನ್ನೂ ಬರೆದರು. ಮೊದಲ ಮತ್ತು ಬಹುಮುಖ್ಯ ಕಾದಂಬರಿ 'ಸುಂದರಿ' ತನ್ನ ನಂಬಿಕೆಗಳಿಗೆ ನಿಷ್ಠಳಾಗಿದ್ದ ಪರಿಶುದ್ಧ ಯುವತಿಯನ್ನು ಚಿತ್ರಿಸುತ್ತದೆ. ಯುದ್ಧರಂಗದಲ್ಲಿ ಆಕೆ ಸಕ್ರಿಯಳಾಗಿದ್ದಳು. ಹಲವು ಬಾರಿ ಆಕೆಯನ್ನು ದೇವತೆಯಂತೆ ಚಿತ್ರಿಸಲಾಗುತ್ತದೆ.

ಸಿಖ್ ಮಹಿಳೆಯರ ಪರವಾದ ಹೋರಾಟಕ್ಕಾಗಿ 'ಸುಂದರಿ'ಯನ್ನು ವಿನ್ಯಾಸಗೊಳಿಸಲಾಯಿತು ಎಂದು ವಿಮರ್ಶಕರು ಬರೆಯುತ್ತಾರೆ. ಹಿಂದೂ, ಮುಸಲ್ಮಾನ ಸಂಪ್ರದಾಯಗಳಿಗಿಂತ ಸಿಖ್‌ಮಹಿಳೆಯ ಸ್ಥಾನಮಾನ ವೈಭವೀಕರಿಸುವ ಯತ್ನವೂ ಇಲ್ಲಿದೆ. ಹಿಂದು, ಮುಸ್ಲಿಂ ಧರ್ಮಗಳು ಮಹಿಳೆಯರನ್ನು ದಮನ ಮಾಡುವಂತಹವು ಎಂಬಂತೆಯೇ ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ,

ಕಾದಂಬರಿಯಲ್ಲಿ ಜೆಂಡರ್ ಅನ್ನು ನಿರ್ವಚಿಸುವ ಕಥಾನಕವನ್ನು ಪರಿಶೀಲಿಸಬಹುದು. ಅಪಾರ ಹಿಂದೂ ಮುಸ್ಲಿಂ ಜನಸಂಖ್ಯೆಯಿರುವ ಸಣ್ಣ ಗ್ರಾಮದಲ್ಲಿ ಶ್ರೀಮಂತ ಹಿಂದೂ ಖತ್ರಿ ಶ್ಯಾಮಾನ ಮನೆಯಿದೆ. ಆತನಿಗೆ ಸುರಷ್ಟಿ (ಸುಂದರಿ) ಎಂಬ ಸುಂದರಳಾದ ಮಗಳಿದ್ದಾಳೆ. ಆಕೆಗೆ 18 ವರ್ಷ. ಆಗಷ್ಟೇ ಆಕೆಯ ವಿವಾಹವಾಗಿದೆ. ಪತಿ ಗೃಹಕ್ಕೆ ತೆರಳಲು ಸಿದ್ಧತೆ ನಡೆದಿದೆ. ಆಕೆಯಿನ್ನೂ ಕನ್ಯೆ ಎಂಬುದನ್ನೂ ಹೇಳಲಾಗುತ್ತದೆ. ಸರ್ವಾಲಂಕಾರ ಭೂಷಿತೆಯಾಗಿ ಶುಭದಿನಗಳ ನಿರೀಕ್ಷೆಯಲ್ಲಿದ್ದಾಳೆ. ಸಂಜೆ ಹಾಡು, ನೃತ್ಯಗಳ ಸಂಭ್ರಮ ಸಾಗಿದ್ದಾಗ, ಒಬ್ಬ ಯುವ ಬಲಶಾಲಿ ಮೊಘಲ್ ಮನೆಯ ಹಿತ್ತಲಿನಿಂದ ಕುದುರೆ ಮೇಲೆ ಬಂದು ಸುರಷ್ಟಿಯನ್ನು ಅಪಹರಿಸುತ್ತಾನೆ. ಆಕೆಯನ್ನು ಆತನಿಂದ ಬಿಡಿಸಲು ಗ್ರಾಮದ ಯಾರೂ ಮುಂದೆ ಬರುವುದಿಲ್ಲ. ಧೈರ್ಯವನ್ನೇ ಕಳ ಕೊಂಡವರಂತಿದ್ದರು. ರಾಜಕೀಯ ನಿಯಂತ್ರಣ, ನಿಷೇಧಗಳು ಅವರ ಅಂತರಂಗ ಸತ್ವವನ್ನೇ ಕಳೆದು ಹಾಕಿದಂತಿತ್ತು.

ಹಳ್ಳಿಯಿಂದ ಕೇವಲ ಒಂದು ಮೈಲಿ ದೂರದಲ್ಲಿ ಆತನ ಶಿಬಿರವಿತ್ತು. ಗ್ರಾಮ ಪಂಚಾಯಿತಿಯ ಇಬ್ಬರು ಹಿರಿಯರ ಜೊತೆ ಹುಡುಗಿಯ ತಂದೆ, ಸೋದರ ಹಾಗೂ ಗಂಡ ಹೋಗಿ ಮುಘಲ್ ಮುಖ್ಯಸ್ಥನಿಗೆ ವಿನಂತಿಸಿ ಕೊಳ್ಳುವುದು ಎಂದು ನಿರ್ಧರಿಸಲಾಯಿತು. ಮುಘಲ್ ಮುಖ್ಯಸ್ಥನನ್ನು ಭೇಟಿಯಾಗಿ ಒಡವೆ, ಚಿನ್ನ , ಬೆಳ್ಳಿ ನೀಡಿ ಹುಡುಗಿಯನ್ನು ವಾಪಸ್ ಪಡೆಯಲು ಯತ್ನಿಸಿದರು. ತನಗಿಷ್ಟ ಬಂದಂತೆ ಮಾಡಲು ತನಗೆ ಆಯ್ಕೆ ಇದೆ ಎಂಬಂತೆ ಆತ ವರ್ತಿಸಿದ. ಪ್ರಯೋಜನವಿಲ್ಲ ಎಂಬ ಅರಿವಾದ ಮೇಲೆ ಸುರಷ್ಟಿಯಿಂದ ಆಶ್ವಾಸನೆಗಳನ್ನು ಪಡೆದು ಹಿಂದಿರುಗಿದರು. ತನ್ನ ಗೌರವ ಕಾಪಾಡಿಕೊಳ್ಳಲು ತನ್ನನ್ನೇ ತಾನು ಕೊಂದು ಕೊಳ್ಳಲು ಸುರಷ್ಟಿ ನಿರ್ಧರಿಸಿದಳು.

ಆದರೆ ಕಡೆಯ ಕ್ಷಣದಲ್ಲಿ ಆಕೆಯ ಸೋದರ ಸಿಖ್ಖರ ತಂಡ ಸೇರಿ ಸಿಖ್ ಆಗಿ ಹೋಗಿದ್ದ ಬಲವಂತ್ ಸಿಂಗ್ ಕಾಣಿಸಿಕೊಳ್ಳುತ್ತಾನೆ. ಮುಘಲ್ ಮುಖ್ಯಸ್ಥ ಕುಡಿಯಲು ನೀರು ತರಲು ಹೋಗಿರುತ್ತಾನೆ. ಆಗ ಸುರಷ್ಟಿ ಇನ್ನೇನು ಬೆಂಕಿ ಹಚ್ಚಿಕೊಳ್ಳಬೇಕು ಆಗ ಅಲ್ಲಿಗೆ ಬರುವ ಸೋದರ, 'ಆತ್ಮಹತ್ಯೆ ಮಹಾ ಅಪರಾಧ' ಎಂದು ತಿಳಿಹೇಳಿ ಸುರಷ್ಟಿಯನ್ನು ಆಕೆಯ ತಂದೆ ತಾಯಿ ಬಳಿ ಒಯ್ಯುತ್ತಾನೆ. ಆದರೆ ಮುಘಲನ ಕೋಪಕ್ಕೆ ಗುರಿಯಾಗಬಹುದೆಂದು ಹೆದರಿ ಮಗಳನ್ನು ಅವರು ಸ್ವೀಕರಿಸುವುದಿಲ್ಲ, ಮುಘಲನಿಗೇ ವಾಪಸ್ ನೀಡಿ ಬಿಡಲು ಸೂಚಿಸುತ್ತಾರೆ.

ತನ್ನ ಜೊತೆಗೇ ಸೋದರಿಯನ್ನು ಕರೆದುಕೊಂಡು ಹೋಗಲು ಸೋದರ ನಿರ್ಧರಿಸುತ್ತಾನೆ. ಸಿಖ್ಖರನ್ನು ನೋಡಿಕೊಳ್ಳುವ ಪಣ ತೊಡುತ್ತಾಳೆ ಆಕೆ. ನವವಿವಾಹಿತೆ ಸುರಷ್ಟಿ ಒಂಟಿಯಾಗಿ ಉಳಿಯಲು ನಿರ್ಧರಿಸುತ್ತಾಳೆ. ಕನ್ಯೆಯಾಗಿ ಪರಿಶುದ್ಧಳಾಗಿಯೇ ಉಳಿಯುತ್ತಾಳೆ.

ಹಿಂದೂ ಕುಟುಂಬದಲ್ಲಿ ಜನಿಸಿದ್ದ ಸುರಷ್ಟಿ ಗುಟ್ಟಾಗಿ ಸಿಖ್ ಪಂಥವನ್ನು ಅನುಸರಿಸುತ್ತಿರುತ್ತಾಳೆ.ಸಿಖ್ ಧಾರ್ಮಿಕ ಗ್ರಂಥಗಳನ್ನು ಪಠಿಸುತ್ತಿರುತ್ತಾಳೆ. ಆಕೆಯ ಸೋದರನೇ ಕಡೆಗೆ ಆಕೆಗೆ ರಕ್ಷಕನಾಗಿ ಬರುತ್ತಾನೆ. ಅಪಾಯದ ಕಾಲದಲ್ಲಿ ಆತ ಮಾತ್ರ ಸಾಹಸಿತನ ಮೆರೆಯುತ್ತಾನೆ.

ಸುರಷ್ಟಿ ಕುದುರೆ ಸವಾರಿಯಲ್ಲಿ ಪರಿಣಿತಳಾಗುತ್ತಾಳೆ. ಪರ್ದಾ ಧರಿಸದೆ ಯಾವುದೇ ಹೆದರಿಕೆ ಇಲ್ಲದೆ ಆಕೆ ಕುದುರೆ ಸವಾರಿ ಮಾಡಬಲ್ಲಳು, ಸಿಖ್ ಪಂಥ ಮಾತ್ರ ನಿಜಕ್ಕೂ ನೈತಿಕ ಹಾಗೂ ಮಾದರಿ ಮಹಿಳೆ ಪುರುಷರನ್ನು ಸೃಷ್ಟಿಸ ಬಲ್ಲುದು ಎಂಬುದನ್ನು ಲೇಖಕರು ಇಲ್ಲಿ ಚಿತ್ರಿಸಲು ಯತ್ನಿಸಿದ್ದಾರೆ. ಧಾರ್ಮಿಕ ಗಡಿಗಳನ್ನು ಮೀರಿ ಇತರರಿಗೆ ಸೇವೆ ಮಾಡುವ ಆದರ್ಶ ಸಿಖ್ ಪಂಥದಲ್ಲಿ ಅಂತರ್ಗತವಾಗಿದೆ.

ಸುಂದರಿಯನ್ನು ದಿಟ್ಟ , ಬಲಶಾಲಿ, ದೃಢ ನಿಶ್ಚಯದ ಮಹಿಳೆಯಾಗಿ ಚಿತ್ರಿಸಲಾಗಿದೆ. ಸೋದರನ ಸಾಹಸ ದಿಟ್ಟತನವನ್ನು ಕಂಡ ಆಕೆ ಮಹಿಳೆಯರು ಏಕೆ ಸಿಖ್ ಪಂಥವನ್ನು ಸೇರಿ ನ್ಯಾಯಯುತ ಧರ್ಮದಲ್ಲಿ ಹೋರಾಡುತ್ತಿಲ್ಲ ಎಂದು ಚಿಂತಿಸುತ್ತಾಳೆ. ಸಾಹಸೀ ಮಹಿಳೆಯಾಗಿ ಪುರುಷರ ಜತೆ ಜತೆಯಾಗಿ ಸೆಣಸುವ ಸಾಹಸಿ ಮೊದಲ ಮಹಿಳೆ ಯಾಗಲು ಅವಳು ನಿರ್ಧರಿಸುತ್ತಾಳೆ. ಸಿಖ್ಖರು ಹಾಗೂ ಸಿಖ್ ಪಂಥಕ್ಕೇ ತನ್ನ ಬದುಕನ್ನು ಅರ್ಪಿಸಿಕೊಳ್ಳುತ್ತಾಳೆ. ಆ ಕಾಲದಲ್ಲಿ ವಾಸ್ತವವಾಗಿ ಮಹಿಳೆಯರನ್ನು ಪೂರ್ಣ ರಕ್ಷಣೆಯಲ್ಲಿಡಲಾಗುತ್ತಿತ್ತು. ಹೊರಗಿನ ಸಾಮಾಜಿಕ ಪ್ರಪಂಚದಲ್ಲಿ ಅವರದು ಅಂತಹ ಗಣನೀಯ ಪಾತ್ರವೇನೂ ಇರಲಿಲ್ಲ.

ಸುರಷ್ಟಿ ಮಾಯವಾದದ್ದು ತಿಳಿದ ನಂತರ ಮುಘಲ್ ಮುಖ್ಯಸ್ಥನ ಸೈನಿಕರ ಜೊತೆಗೆ ಭೀಕರ ಯುದ್ಧವಾಗುತ್ತದೆ. ಸಾಹಸದಿಂದ ಹೋರಾಡು ತ್ತಾರೆ. ಆದರೆ ಅವರ ಕುದುರೆಗಳು ಗಾಯಗೊಳ್ಳುತ್ತವೆ. ಹೀಗಾಗಿ ಸೋದರ ಸೋದರಿಯರಿಬ್ಬರೂ ಸೆರೆ ಸಿಕ್ಕುತ್ತಾರೆ. ಸೆರೆಯಿಂದ ಬಿಡುಗಡೆ ಯಾದ ನಂತರ ಇತರ ಸಿಖ್ಖರ ನೆರವಿನೊಂದಿಗೆ ಕಾಡಿನಲ್ಲಿರುವ ಸಿಖ್ಖರ ಗುಂಪನ್ನು ಸೇರಿಕೊಳ್ಳುತ್ತಾಳೆ. ಸೈನಿಕರ ಸಹವಾಸ, ಸೇವೆಯಲ್ಲಿ ಅವಳ ಜೀವನ ಸಾಗುತ್ತದೆ. ಈ ಗುಂಪಿನ ನಾಯಕ ಸರ್ದಾರ್ ಶಾಮ್ ಸಿಂಗ್ ಆಕೆಗೆ ಹೊಸ ಹೆಸರು ಕೊಡುತ್ತಾನೆ. ಎಲ್ಲ ಪುರುಷರ ದೇವ ಸೋದರಿಯಾಗುತ್ತಾಳೆ ಆಕೆ. ತಾಯಿ ಸಾಹಿಬ್ ದೇವಾ ಹಾಗೂ ತಂದೆ ಗುರು ಗೋವಿಂದ್ ಸಿಂಗ್ ಮಗಳು ಆಕೆ ಎಂದು ಪರಿಗಣಿಸಬೇಕೆಂದು ಎಲ್ಲರಿಗೂ ಕೋರಲಾಗುತ್ತದೆ. ಧಾರ್ಮಿಕ ವಿಧಿ ವಿಧಾನಗಳ ಪ್ರಕಾರ ಆಕೆಗೆ ಸುಂದರ್ ಕೌರ್ ಎಂಬ ಹೆಸರನ್ನು ಇಡಲಾಗುತ್ತದೆ. ಅನಂತರ ಆಕೆ ಸುಂದರಿ ಎಂದೇ ಜನಪ್ರಿಯಳಾಗುತ್ತಾಳೆ. ಎಲ್ಲರೂ ಆಕೆಯನ್ನು ಸೋದರಿಯಾಗಿ ಕಾಣುತ್ತಾರೆ. ಈ ವಿಧಿ ವಿಧಾನಗಳು ಮುಗಿದ ನಂತರ ಆಕೆ ಅಡುಗೆ ಮನೆಗೆ ಹೋಗಿ 'ಲ್ಯಾಂಗರ್ ' / 'ದೇರಾ' ಆಹಾರದ ಉಸ್ತುವಾರಿ ವಹಿಸಿ ಕೊಳ್ಳುತ್ತಾಳೆ. ಎಲ್ಲರಿಗೂ ಸಂತಸದಿಂದ ಅಡುಗೆ ಮಾಡಿ ಬಡಿಸುತ್ತಾಳೆ. ಎಲ್ಲಾ ಬಗೆಯ ಸಂಘರ್ಷಗಳು, ಕಾರ್ಯಾಚರಣೆ ಗಳಲ್ಲಿ ಜತೆಸಾಗಿ ಕಾಡಿನಲ್ಲೇ ನೆಲೆ ನಿಲ್ಲುತ್ತಿದ್ದಳು. ಸಾಹಸದಿಂದ ಹೋರಾಡುತ್ತಿದ್ದಳು. ಗಾಯಗೊಂಡ ಸೈನಿಕರು ಸಿಖ್ಖ ರಿರಲಿ, ಶತ್ರುಗಳಿರಲಿ ಆರೈಕೆ ಮಾಡುತ್ತಿದ್ದಳು. ಆಕೆಯ ಅಂತ್ಯ ಆದದ್ದೂ ಇಂತಹ ಸಂದರ್ಭದಲ್ಲೇ. ಗಾಯಗೊಂಡು ಬಿದ್ದಿದ್ದ ಪಠಾಣ್ (ಆಫ್ಘನ್ ) ಸೈನಿಕನೊಬ್ಬನಿಗೆ ದಯೆತೋರಿಸಿ ನೆರವು ನೀಡಲು ಹೋದಾಗ ಕತ್ತಿಯ ಏಟಿಗೆ ಬಲಿಯಾಗಿ ಸಾವಿಗೀಡಾಗುತ್ತಾಳೆ.

ಆದರೆ ಆಕೆ ಒಳ್ಳೆಯ ಸೈನಿಕಳೂ ಆಗಿದ್ದಳು. ಒಮ್ಮೆ ಆಕೆ ಸ್ಥಳೀಯ ಅಮೀರನಿಗೆ ಸೆರೆಸಿಕ್ಕು ಆತನ ಅರಮನೆಗೆ ಒಯ್ಯುವ ಹಾದಿಯಲ್ಲಿ ಚತುರತೆಯಿಂದ ಆತನ ಕತ್ತಿಯನ್ನು ಕಿತ್ತುಕೊಂಡು ಕ್ಷಣದಲ್ಲಿ ಅವನನ್ನು ಸಾಯಿಸುತ್ತಾಳೆ. ಅನಂತರ ಅವನದೇ ಕುದುರೆ ಏರಿ ದಟ್ಟ ಕಾಡಿನಲ್ಲಿ ಮರೆಯಾಗುತ್ತಾಳೆ.

ಸಹಾಯ ಹಸ್ತ ನೀಡುವಲ್ಲಿ ಸುಂದರಿಯ ವ್ಯಕ್ತಿತ್ವ ಮೇರೆ ಮೀರಿದ್ದು. ಎಲ್ಲಾ ಧಾರ್ಮಿಕ ಗಡಿಗಳನ್ನೂ ಮೀರಬಲ್ಲವಳು ಆಕೆ. ಅಗತ್ಯ ಇರುವವರಿಗೆಲ್ಲಾ ಸಹಾಯ ಮಾಡಿದಾಕೆ. ಈ ನಿಟ್ಟಿನಲ್ಲಿ ಆಕೆ ಅತ್ಯಂತ ಗೌರವಾನ್ವಿತ ಸ್ಥಾನ ಗಳಿಸಿಕೊಂಡಿದ್ದಾಳೆ.

ಮಹಿಳೆಯರಿಗೆ ಸಾರ್ವತ್ರಿಕ ಅಸ್ಮಿತೆಯಿದೆ ಎಂದು ಪಂಜಾಬಿನ ಮೊದಲ ಕವಯಿತ್ರಿ ಪೀರೊ ವಾದಿಸುತ್ತಾರೆ. ಈ ಎಲ್ಲಾ ವಿಭಜನೆಗಳಿಗೆ ಮಹಿಳೆಯರು ಅತೀತರು. ಧಾರ್ಮಿಕ ವಿಭಜನೆಗಳು ಪುರುಷರಲ್ಲಿ ಮಾತ್ರ ಕಂಡುಬರುತ್ತವೆ. ಧರ್ಮದ ಮೂಲಕ ತಮ್ಮ ಅಸ್ಮಿತೆಗಳನ್ನು ಪುರುಷರು ರೂಪಿಸಿಕೊಂಡಿದ್ದಾರೆ. ಆದರೆ ಮಹಿಳೆಯ ಅಸ್ಮಿತೆ ಇರುವುದು ಮಹಿಳೆಯಾಗಿಯೇ.

ಸ್ವಲ್ಪ ಕಾಲದ ಅನಂತರ ಇನ್ನೂ ಅನೇಕ ಅನಾಥ ಮಹಿಳೆಯರು ಸಿಖ್ಖರನ್ನು ಸೇರಿಕೊಂಡು ಸಿಖ್ ಧರ್ಮಕ್ಕೆ ಮತಾಂತರ ಗೊಂಡರು. ಅವರಿಗೆಲ್ಲಾ ದೀಕ್ಷೆನೀಡಿ ಹೊಸ ಹೆಸರುಗಳನ್ನು ನೀಡಲಾಯಿತು. ಮಹಿಳೆ ಪುರುಷರಿಬ್ಬರಿಗೂ ಒಂದೇ ತೆರನಾದ ವಿಶಿಷ್ಟ ಸಿಖ್ ಹೆಸರುಗಳು ಲಿಂಗ ಸಮಾನತೆಯನ್ನು ಸಾರುತ್ತವೆ ಎಂಬ ವಾದವೂ ಇದೆ. ಸಿಖ್ ಮಹಿಳೆಯರಲ್ಲಿ 'ಕೌರ್' ಎಂಬ ಉಪನಾಮ 19ನೇ ಶತಮಾನದ ಉತ್ತರಾರ್ಧದಲ್ಲಷ್ಟೇ ಆರಂಭವಾಯಿತು ಎನ್ನಲಾಗಿದೆ.

ಭಾಯಿ ವೀರ್‌ಸಿಂಗ್ ಅವರು ಸಿಖ್ಖರ ಸಮಕಾಲೀನ ಸನ್ನಿವೇಶಗಳು ಅದೂ ಸಿಖ್ ಮಹಿಳೆಯರ ಸ್ಥಿತಿಗತಿಗಳನ್ನು ವಿಶ್ಲೇಷಿಸುತ್ತಾರೆ. ಸುಂದರಿ ಮಾದರಿಯ ಮೂಲಕ ಸಿಖ್‌ಮಹಿಳೆಯ ನಿಜರೂಪವನ್ನು ಅನಾವರಣಗೊಳಿಸುತ್ತಿರುವುದಾಗಿ ಅವರು ಹೇಳುತ್ತಾರೆ. ಸುಂದರಿಯು ಸಿಖ್ ಮಹಿಳೆಯರು ಅನುಸರಿಸಬೇಕಾದ ಅಸ್ಮಿತೆಯನ್ನು ಪ್ರತಿನಿಧಿಸುತ್ತಾಳೆ. ಹಿಂದೂ ದೇವ ದೇವತೆಗಳಿಗೆ ಪರ್ಯಾಯವೊಂದನ್ನು ರೂಪಿಸಲು ಅವರು ಯತ್ನಿಸಿದ್ದರು ಎಂದು ವಿಮರ್ಶಕರು ಹೇಳುತ್ತಾರೆ.ಇದು ಮೂಲತಃ ಹಿಂದೂ ವಾದದ ತಿರಸ್ಕಾರ. ಹೆಸರಿನ ಬದಲಾವಣೆ ಇದನ್ನೇ ಸೂಚಿಸುತ್ತದೆ. ಸುರಷ್ಟಿ ಎಂದರೆ ವಿದ್ಯಾದೇವತೆ ಸರಸ್ವತಿಯನ್ನು ಸೂಚಿಸು ವಂತಹದ್ದು.ಈಗ ಸಾಹಸಿ, ದಿಟ್ಟ, ಸುಂದರಳಾದ ಹೊಸ ಮಹಿಳೆಯ ಅಸ್ಮಿತೆಯನ್ನು ಕಟ್ಟಿಕೊಡಲಾಯಿತು. ದೇವತೆ ಎಂದೆನಿಸಿದ ಸುಂದರಿ ದುರ್ಗಾಳ ಸ್ಥಾನವನ್ನಾಕ್ರಮಿಸುತ್ತಾಳೆ. ಮೂಲ ಮೂರ್ತಿಯ ಸ್ಥಾನಕ್ಕೆ ಆಕೆಯನ್ನು ಎತ್ತರಿಸುವುದು ವ್ಯಕ್ತಿಯ ಎಲ್ಲಾ ಒಳ್ಳೆಯ ಗುಣ ಸ್ವಭಾವಗಳನ್ನೂ ಒಳಗೊಳ್ಳುತ್ತದೆ. ಮಹಿಳೆಯ ಗುಣ ಲಕ್ಷಣಗಳನ್ನು ಇದು ಒಳಗೊಳ್ಳುವುದಿಲ್ಲ. ಆದರೆ ಪುರುಷ ಸ್ವಭಾವ ದಟ್ಟೈಸುತ್ತದೆ. ಜೆಂಡರ್ ನಿರ್ವಚನ ಇಲ್ಲಿ ಮಂಕಾಗುತ್ತದೆ, ಎಂದರೆ ಕೆಲವು ಗುಣ ಲಕ್ಷಣಗಳಲ್ಲಿ ಪುರುಷ-ಮಹಿಳೆ ಸ್ವಭಾವಗಳು ಬೆರೆತುಕೊಳ್ಳುತ್ತವೆ. ಕೆಲವನ್ನು ಪಾರಂಪರಿಕವಾಗಿ ಪುರುಷ ಸ್ವಭಾವಗಳೆಂದು ಹೆಸರಿಸಿದ್ದರೂ ಜೋನ್ ಆಫ್‌ಆರ್ಕ್ , ರಜಿಯಾ ಸುಲ್ತಾನಾಳಂತಹ ಚಾರಿತ್ರಿಕ ವ್ಯಕ್ತಿತ್ವಗಳು ಇದ್ದೇ ಇವೆ.

ಭಾಯಿ ವೀರ್‌ಸಿಂಗ್ ಅವರ ಈ ಕೃತಿಯಲ್ಲಿ ಕುತೂಹಲಕರ ವಾದದ್ದು ಏನೆಂದರೆ, ಮಹಿಳೆ ಅಡುಗೆ ಮನೆ ಉಸ್ತುವಾರಿ ವಹಿಸುವವಳು, ಆಹಾರ ನೀಡುವ ಅನ್ನಪೂರ್ಣೆ, ರೋಗಿಗಳು ಹಾಗೂ ಗಾಯಗೊಂಡ ಸೈನಿಕರ ಆರೈಕೆ ಮಾಡುವವಳೂ ಹೌದು ಎಂಬುದನ್ನು ನಿರ್ವಚಿಸ ಲಾಗಿದೆ. ಇತರರ ಕಾಳಜಿ ಹಾಗೂ ಸೇವೆ ಮಾದರಿ ಮಹಿಳೆಯ ಭಾಗವಾಗಿದೆ. ಪವಿತ್ರಗ್ರಂಥ (ನಾಮ್ ಜಪ್‌ನಾ) ಪಠಿಸಲು ಹಾಗೂ ಬೇರೆಯವರ ಸೇವೆ ಮಾಡಲು ಜ್ಞಾನಸಂಪತ್ತು ನೀಡಬೇಕೆಂದು ದೇವರಿಗೆ ಆಕೆ ಪ್ರಾರ್ಥಿಸುತ್ತಾಳೆ. ಆಕೆ ಧಾರ್ಮಿಕಳು, ಭಕ್ತೆ ಹಾಗೂ ದೈವಕ್ಕೆ ಹೆದರುವವಳು. ಆಕೆ ಹೊಸ ಶಕ್ತಿಯ ಸಂಕೇತ. ಒಂದೆಡೆ ಧರ್ಮನಿಷ್ಠಳಾದ ಸಿಖ್, ಮತ್ತೊಂದೆಡೆ ಸಾಹಸಿ ಬಲಿಷ್ಠ ದಿಟ್ಟ ಸೈನಿಕಳು. ಸಂತ/ಸಿಪಾಯಿ ದ್ವಂದ್ವವಾಗಿ ಮಹಿಳೆಯನ್ನು ನಿರ್ವಚಿಸಲಾಗಿದೆ.

ಸುಂದರಿಯ ಜ್ಞಾಪಕಾರ್ಥ ಪಂಜಾಬ್ ನ ಗುರುದಾಸ್ ಪುರ ಜಿಲ್ಲೆಯ ಕಹ್ನುವಾನ್ ಬಳಿ ಸಿಖ್ಖರು ನಿರ್ಮಿಸಿರುವ ಪುರಾತನ 'ಬೌಲಿ' ಇದೆ ಎಂದು ಕಾದಂಬರಿಯ ಉಪಸಂಹಾರ ಭಾಗದಲ್ಲಿ ಹೇಳಲಾಗಿದೆ.

ಸಿಖ್ ಮಹಿಳೆಯರ ವಿಶಿಷ್ಟ ವ್ಯಕ್ತಿತ್ವಗಳ ನಿರೂಪಣೆ ಅವರನ್ನು ಬೇರೆಯವರಿಗಿಂತ ಭಿನ್ನರಾಗಿಸುತ್ತದೆ. ದಿಟ್ಟತನ, ಧರ್ಮಕ್ಕಾಗಿ ಧೈರ್ಯ ದಿಂದ ಜೀವ ತೆರಲೂ ಸಿದ್ಧವಾಗುವುದು, ಗುರುಗಳ ಪ್ರೀತಿ ಈ ಮಹಿಳೆಯರಲ್ಲಿ ಅನನ್ಯ. ದೊಡ್ಡ ವಿದ್ವಾಂಸ ಹರಕಿರತ್‌ಸಿಂಗ್ ನ ಪತ್ನಿಯು ಪತಿ ಹಾಗೂ ಮಗನ ಹತ್ಯೆಯನ್ನು ದಿಟ್ಟವಾಗಿಯೇ ಒಪ್ಪಿ ಕೊಳ್ಳುತ್ತಾಳೆ. ಇದೇ ರೀತಿ, ದಿವಾನ್ ಲಖ್‌ಪತ್ ರಾಯ್ ನ ಸೈನಿಕರು ತಮ್ಮನ್ನು ಕೊಲ್ಲಬಹುದೆಂಬ ಅರಿವಿದ್ದರೂ ಅಮೃತಸರದ ದರ್ಬಾರ್ ಸಾಹಿಬ್ (ಸುವರ್ಣ ದೇವಾಲಯ) ಗೆ ಗೌರವ ಸಲ್ಲಿಸಲು ಮಗನೊಂದಿಗೆ ಟುಂಗ್ ಗ್ರಾಮದಿಂದ ಮಹಿಳೆಯೊಬ್ಬಳು ಬರುತ್ತಾಳೆ. ಬೇರೆಯವರ ಬುದ್ಧಿವಾದಕ್ಕೆ ಅವಳು ಮಣಿಯುವುದಿಲ್ಲ. ಗುರುಗೆ ನಿಷ್ಠಳಾಗಿಯೇ ಅವಳು ಉಳಿಯುತ್ತಾಳೆ. ತನ್ನ ಕರ್ತವ್ಯ ಪಾಲನೆಗೆ ಇದೊಂದು ಅಗ್ನಿ ಪರೀಕ್ಷೆ ಎಂದಷ್ಟೇ ಅವಳು ಬಗೆಯುತ್ತಾಳೆ.

ಕಾದಂಬರಿಯ ಕೊನೆಯಲ್ಲಿ ಭಾಯಿ ವೀರ್‌ಸಿಂಗ್ ಅವರು ಸಮಕಾಲೀನ ಮಹಿಳೆಯರಿಗೆ ಈ ಸಂದೇಶ ನೀಡುತ್ತಾರೆ:

"ಓ ಸಿಖ್ ಮಹಿಳೆಯರೆ, ಬೆಳ್ಳಿಚಮಚ ಬಾಯಲ್ಲಿಟ್ಟುಕೊಂಡು ಜನಿಸಿ ಸುಖ ವೈಭೋಗಗಳಲ್ಲಿ ಬದುಕುತ್ತಿರುವವರೆ ! ಬಡ ಹಾಗೂ ಶ್ರೀಮಂತ ಸಿಖ್ಖರ ಪತ್ನಿಯರೆ, ಸೋದರಿಯರೆ ಹಾಗೂ ಮಾತೆಯರೆ ! ನಿಮ್ಮ ಪೂರ್ವಿಕಳಾದ ಸುಂದರಿಯ ನಂಬಿಕೆ, ಅವಳು ಅನುಭವಿಸಿದ ಕಷ್ಟಗಳನ್ನು ನೋಡಿ. ಆಕೆ ಧರ್ಮದ ಅಚಲ ವಿಶ್ವಾಸವನ್ನು ಎಂದೂ ಕಳೆದುಕೊಳ್ಳಲಿಲ್ಲ. ಬದುಕಿನಲ್ಲಿ ಅಪಾಯಗಳನ್ನೆದುರಿಸುತ್ತಾಳೆ ಆದರೆ ಗುಣ ಬಿಟ್ಟುಕೊಡುವುದಿಲ್ಲ. ತೊಂದರೆ, ಕಷ್ಟಗಳ ಕಾಲದಲ್ಲಿ ದೃಢವಾಗಿ ಉಳಿದು ಸಿಖ್ ಧರ್ಮದ ತತ್ವಗಳಿಗೇ ಅಂಟಿಕೊಳ್ಳುತ್ತಾಳೆ. ನಿಮ್ಮನ್ನೇ ನೋಡಿಕೊಳ್ಳಿ.. ಸಿಖ್ ಸಮುದಾಯಕ್ಕೆ ಹಾನಿ ಉಂಟು ಮಾಡುತ್ತಿರುವಿರಾ ಇಲ್ಲವಾ ಎಂಬ ಬಗ್ಗೆ ನಿಮ್ಮನ್ನೇ ನೀವು ಅರಿತುಕೊಳ್ಳಿ. ಧೈರ್ಯವಾಗಿರಿ. ಸುಂದರಿಯಂತೆ ಸತ್ಯನಿಷ್ಠ ಸಿಖ್ ಮಹಿಳೆಯರಾಗಿ. ಅವಳಂತೆ ಗುಣವಂತೆಯಾಗಿ. ನಿಮ್ಮನ್ನು ಮತ್ತು ಮಕ್ಕಳನ್ನು ನಿಜವಾದ ಸಿಖ್ಖರನ್ನಾಗಿಸಿ. ಇಲ್ಲದಿದ್ದಲ್ಲಿ ನೀವು ನಿಮ್ಮ ಪತಿಗೆ ಗಿಡವನ್ನು ಒಣಗಿಸಿ ತಾನೂ ನಾಶವಾಗುವ ವಿನಾಶಕಾರಿ ಬಳ್ಳಿಯಂತಾಗಿ ಬಿಡುತ್ತೀರಿ."

ಭಾಯಿ ವೀರ್ ಸಿಂಗ್ ಅವರು 18ನೇ ಶತಮಾನದ ಪಂಜಾಬ್ ಅನ್ನು ಇಲ್ಲಿ ಸೃಷ್ಟಿಸಿದ್ದು, ಇಲ್ಲಿ ಮೂರು ಧಾರ್ಮಿಕ ಸಮುದಾಯಗಳ ಸಹಅಸ್ತಿತ್ವ ಇದೆ. ಹಲವು ಭಿನ್ನಾಭಿಪ್ರಾಯಗಳ ನಡುವೆಯೂ ಇಲ್ಲಿ ಮೂರು ಸಮುದಾಯಗಳು ಸಂವಾದಿಸುತ್ತಿವೆ. ಆದರೆ ಅವು ಸೌಹಾರ್ದಯುತ ರೀತಿಯಲ್ಲಿಲ್ಲ.

'ಸುಂದರಿ' ಕೃತಿಯಲ್ಲಂತೂ ಭಾಯಿ ವೀರ್‌ಸಿಂಗ್ ಧಾರ್ಮಿಕ ಸಮುದಾಯಗಳಿಗೆ ನಿರ್ದಿಷ್ಟ ಅಸ್ಮಿತೆಗಳನ್ನು ಸೃಷ್ಟಿಸುತ್ತಾರೆ. ಮೊದಲಿಗೆ ಸಾಹಸಿ, ದಿಟ್ಟರಾದ ಸಿಖ್ಖರು ರಕ್ಷಕರು. ಇದು ಆದರ್ಶ. ಎರಡನೆಯದಾಗಿ ಹಿಂದೂಗಳನ್ನು ಹೇಡಿಗಳು, ಅಸಹಾಯಕರು, ಚತುರತೆ ಇಲ್ಲದವರು, ಇತರರ ದಯೆ-ಸಹಾನುಭೂತಿಗೆ ಅರ್ಹರಾದವರು ಎಂದು ಕೃತಿಯುದ್ದಕ್ಕೂ ಚಿತ್ರಿಸಲಾಗಿದೆ. ಮೂರನೆಯದಾಗಿ ದಮನಕಾರರಾಗಿ ಮುಸ್ಲಿಮರನ್ನು ಚಿತ್ರಿಸಲಾಗಿದೆ.

**ಸಿಖ್ ಅಸ್ಮಿತೆ: ಯೋಧ, ಸಾಹಸಿ, ರಕ್ಷಕ**

ಆ ಕಾಲದಲ್ಲಿ ಸಿಖ್ ಆಗುವುದು ಸಮಾಜದಲ್ಲಿ ಇನ್ನೂ ಅಂಗೀಕೃತವಾಗಿರಲಿಲ್ಲ. ಯಾರಾದರೂ ಸಿಖ್‌ಧರ್ಮಕ್ಕೆ ಮತಾಂತರ ವಾದರೆ ಅವರನ್ನು ಸತ್ತಂತೆ ಕುಟುಂಬ ಭಾವಿಸುತ್ತಿತ್ತು.

**ಸಿಖ್ ಅಂದರೆ ಯಾರು?**

ಸಿಖ್ ಎಂದರೆ ಸಿಖ್ಖರ 10ನೇ ಗುರು ಗುರುಗೋವಿಂದ್ ಸಿಂಗ್‌ರ ಪುತ್ರ ಎಂದು ಭಾವಿಸಲಾಗುತ್ತಿತ್ತು . ಮೂರು ಧಾರ್ಮಿಕ ಸಮುದಾಯಗಳ ತ್ರಿಕೋನ ನಿರೂಪಣೆಯಲ್ಲಿ ಮುಸ್ಲಿಮ್ ಆಡಳಿತಗಾರರ ದಮನದಿಂದ ಹಿಂದೂಗಳನ್ನು ರಕ್ಷಿಸುವ ರಕ್ಷಕರಾಗಿ ಸಿಖ್ಖರನ್ನು ಬಿಂಬಿಸಲಾಗುತ್ತಿತ್ತು.

ಸಿಖ್ಖರು ತಮ್ಮ ಹಿತ ರಕ್ಷಿಸಿಕೊಳ್ಳ ಬಲ್ಲವರಾಗಿದ್ದರು. ಆದರೆ ಹಿಂದೂಗಳಿಗೆ ಅದು ಸಾಧ್ಯವಿರಲಿಲ್ಲ. ತನ್ನ ಹೆಂಡತಿಯನ್ನು ಸ್ಥಳೀಯ ಮುಸ್ಲಿಂ ಮುಖ್ಯಸ್ಥ ಅಪಹರಿಸಿದಾಗ ಶ್ರೀಮಂತ ಹಿಂದೂ ಖತ್ರಿ

ಅಸಹಾಯಕನಾಗುತ್ತಾನೆ; ಆತ್ಮಹತ್ಯೆಗೆ ಯತ್ನಿಸುತ್ತಾನೆ. ಆಗ ಎದುರಾಗುವ ಸುಂದರಿ ಬದುಕಿನಲ್ಲಿ ಭರವಸೆ ತಾಳಬೇಕೆಂಬ ಅರಿವು ಮೂಡಿಸುತ್ತಾಳೆ. ಪತ್ನಿಯನ್ನು ವಾಪಸ್ ಪಡೆಯಲು ಸಿಖ್ಖರು ನೆರವಾಗಬಲ್ಲರು ಎಂದು ಧೈರ್ಯ ತುಂಬುತ್ತಾಳೆ. ಸೆರೆಯಲ್ಲಿ ನಿಷೇಧಿತ ಆಹಾರ ತಿನ್ನಬೇಕಾಗಿ ಬಂದಿದ್ದ ಆತನ ಪತ್ನಿ ಸಿಖ್ಖರ ನೆರವಿನಿಂದ ಬಿಡುಗಡೆಯಾಗುತ್ತಾಳೆ.

ಕೆಲವು ಮಹಿಳೆಯರನ್ನು ರಕ್ಷಿಸಲು ಮುಸ್ಲಿಂ ಪ್ರದೇಶಗಳು ಅಥವಾ ಅರಮನೆಗಳ ಮೇಲೆ ಸಿಖ್‌ಸೇನೆ ಆಕ್ರಮಣ ಮಾಡಿದಾಗಲೆಲ್ಲಾ ಅವರ ಕಾರ್ಯಾಚರಣೆಯನ್ನು ಯಾವ ರೀತಿ ಯೋಜಿಸಲಾಗಿರುತ್ತಿತ್ತು ಎಂದರೆ ಆ ಕ್ರಿಯೆ ತ್ವರಿತವಾಗಿರುತ್ತಿತ್ತಲ್ಲದೆ, ಚಾಣಾಕ್ಷತನದ ದಕ್ಷತೆ ಹೊಂದಿರುತ್ತಿತ್ತು. ಎಷ್ಟೊಂದು ಯೋಜಿತವಾಗಿರುತ್ತಿತ್ತು ಎಂದರೆ ಪ್ರತಿ ಬಾರಿಯೂ ತ್ವರಿತಕ್ರಿಯೆಯಲ್ಲಿ ಅಪರಾಧಿಗಳನ್ನು ಶಿಕ್ಷಿಸಿ, ಅವರ ಸಂಪತ್ತನ್ನು ಲೂಟಿ ಮಾಡುತ್ತಿದ್ದರು. ಕೆಲವೊಮ್ಮೆ ಅಪರಾಧಿಗಳ ಕೊಲೆಯೂ ನಡೆಯುತ್ತಿತ್ತು.

ಕಾದಂಬರಿಯ ಕಥಾನಕದುದ್ದಕ್ಕೂ ಸಿಖ್ ಧರ್ಮ ಸಾರ್ವತ್ರಿಕ, ಸಮಾನತಾ ತತ್ವ ಆಧರಿತ ಹಾಗೂ ಸಮಾನತೆಯ ತತ್ವವನ್ನಾಧರಿಸಿದೆ ಎಂಬುದುನ್ನು ನಿರೂಪಿಸಲು ಯತ್ನಿಸಲಾಗಿದೆ.

ಸಿಖ್ಖರು ಉಪಕಾರ ಬುದ್ಧಿಯುಳ್ಳವರು ಎಂಬುದನ್ನು ತೋರಿಸಲೂ ಕಾದಂಬರಿಯಲ್ಲಿ ಅನೇಕ ಉದಾಹರಣೆಗಳಿವೆ. ಗಾಯಗೊಂಡ ಮುಸ್ಲಿಮ ರಿಗೆ ಸುಂದರಿ ಶುಶ್ರೂಷೆ ಮಾಡಿ ಆರೈಕೆ ಮಾಡುತ್ತಾಳೆ. ಆದರೆ ಅದಕ್ಕೆ ಪ್ರತಿಯಾಗಿ ಅವರು ಆಕೆಗೆ ಹಾಗೂ ಸಿಖ್ಖರಿಗೆ ಸಮಸ್ಯೆ ಉಂಟು ಮಾಡುತ್ತಾರೆ. ಹಲವು ಸಂದರ್ಭಗಳಲ್ಲಿ ಮುಸ್ಲಿಂ ಮಹಿಳೆಯರೂ ನ್ಯಾಯಕ್ಕಾಗಿ, ಮುಸ್ಲಿಂ ದೊರೆಗಳ ದೌರ್ಜನ್ಯದಿಂದ ರಕ್ಷಣೆಗಾಗಿ ಸಿಖ್ಖರ ಬಳಿ ಬರುತ್ತಾರೆ.

ತನ್ನ ಕುಸಿಯುತ್ತಿರುವ ಆರೋಗ್ಯವನ್ನು ಗಮನಿಸಿ ಹಾಗೂ ಬದುಕು ಕೊನೆಗೊಳ್ಳಬಹುದೆಂಬುದನ್ನು ಮನಗಂಡು ತನ್ನ ಜೊತೆಗಿರುವ ಸಿಖ್ಖರಿಂದ ಎರಡು ಅನುಗ್ರಹಗಳನ್ನು ಕೋರುತ್ತಾಳೆ. ತನ್ನ ಚಿಕಿತ್ಸೆಗಾಗಿ ಹಣ ವ್ಯಯಿಸಿದ ಹಕೀಮರ ಬಗ್ಗೆ ಕೃತಜ್ಞತೆ ವ್ಯಕ್ತ ಪಡಿಸುತ್ತಾಳೆ; ಹಕೀಮರಿಗೆ ಸ್ವಲ್ಪ ಹಣ ಕಳಿಸಲು ಕೋರುತ್ತಾಳೆ.

"ಎರಡನೆಯದು ತನ್ನ ಸಿಖ್ ಸೋದರರಿಗೆ ಆಳವಾದ ಬುದ್ಧಿವಾದ... ನಿಮ್ಮ ಮಹಿಳೆಯರನ್ನು ಸಮಾನ ಸಂಗಾತಿಗಳಾಗಿ ಭಾವಿಸಬೇಕೆಂದು ಕೋರುತ್ತೇನೆ. ಮಹಿಳೆಯರನ್ನೆಂದೂ ಕೀಳಾಗಿ ನೋಡ ಬೇಡಿ. ಅವರನ್ನು ಕಠಿಣವಾಗಿ, ಕ್ರೌರ್ಯದಿಂದ ನೋಡಲು ಶುರು ಮಾಡಿದಲ್ಲಿ ಕೆಟ್ಟ ಉದ್ದೇಶಗಳಿದ್ದಲ್ಲಿ ನಿಮ್ಮ ಪ್ರತಿಷ್ಠೆ ಅವನತಿ ಹೊಂದುತ್ತಾ ಸಾಗುತ್ತದೆ. ಶಾಸ್ತ್ರಗಳಲ್ಲಿ ಮಹಿಳೆಯನ್ನು ಶೂದ್ರಳಾಗಿ, ಕೀಳು ಜಾತಿಯವಳಾಗಿ ಮಲಿನಳು, ಅಪರಿಶುದ್ಧಳು ಎಂದೆಲ್ಲಾ ಭಾವಿಸಲಾಗಿದೆ. ನಮ್ಮ ಎಲ್ಲಾ ಹತ್ತು ಗುರುಗಳೂ ಮಹಿಳೆಯನ್ನು ಸ್ತುತಿಸಿದ್ದಾರೆ. ಗುರು ಗ್ರಂಥ ಸಾಹಿಬ್‌ನಲ್ಲಿ ಮಹಿಳೆಯನ್ನು ಸ್ತುತಿಸಲಾಗಿದ್ದು ಅವಳಿಗೆ ಪೂಜೆಯ ಸಮಾನ ಹಕ್ಕು, ಪವಿತ್ರ ಗ್ರಂಥ ಪಠಣದ ಹಕ್ಕುಗಳನ್ನೂ ನೀಡಲಾಗಿದೆ. ನೀವು ನಮ್ಮನ್ನು ರಕ್ಷಿಸಿ ಗೌರವ ವನ್ನು ನೀಡುತ್ತಿದ್ದೀರಿ. ಇದಕ್ಕಾಗಿಯೇ ಶತ್ರುಗಳ ಅಪಾಯಗಳ ಸಾಗರದಲ್ಲಿಯೂ ನಾವು ಚೆನ್ನಾಗಿಯೇ ಇದ್ದೇವೆ".

ಹಿಂದೂ ಧರ್ಮದಲ್ಲಿ ಅಧೀನ ಸ್ಥಿತಿಗೆ ದೂಡುವ ಮಹಿಳೆಗೆ ತದ್ವಿರುದ್ಧವಾದ ಮಹಿಳೆ ಕುರಿತಾದ ಸಕಾರಾತ್ಮಕ ದೃಷ್ಟಿಕೋನ ಸಿಖ್ ಧರ್ಮಕ್ಕೆ ಅಂತರ್ಗತವಾದುದು.

ಯುದ್ಧದ ಒಂದು ಸಂದರ್ಭದಲ್ಲಿ ಗಾಯಗೊಂಡ ಆಫ್ಘನ್ ಯೋಧ ಎದುರಾಗುತ್ತಾನೆ. ಆತನಿಗೆ ಸುಂದರಿ ನೀರು ನೀಡಿ ಗಾಯ ಗಳಿಗೆ ಬ್ಯಾಂಡೇಜ್ ಕಟ್ಟಿ ಉಪಚರಿಸುತ್ತಾಳೆ. ಪ್ರಜ್ಞೆ ಮರಳಿದಾಗ ಆ ಯೋಧ ಆಕೆಯ ಧರ್ಮದ ಬಗ್ಗೆ ಕೇಳುತ್ತಾನೆ. ಆಕೆ ಸಿಖ್ ಎಂದು ಗೊತ್ತಾದಾಗ ಕಾಫಿರಳೆಂದು ಮೂದಲಿಸಿ ಆಕೆಯ ಮೇಲೆ ತನ್ನ ಕತ್ತಿಯಿಂದ ಆಕ್ರಮಣ ಮಾಡುತ್ತಾನೆ. ಗಾಯಗೊಂಡು ನರಳುತ್ತಾ ಬಿದ್ದಿದ್ದಾಗ ಅಲ್ಲಿಗೆ ಬರುವ ಹಕೀಮ್ ತನ್ನ ಅರಮನೆಗೆ ಕರೆದೊಯ್ದು ಉಪಚರಿಸುತ್ತಾನೆ. ಈತ ಹಿಂದೊಮ್ಮೆ ಈಕೆಯನ್ನು ಅಪಹರಿಸಿ ದಂತಹವನೇ. ಆಕೆ ಹುಷಾರಾದ ಕೂಡಲೇ ಮದುವೆಯಾಗುವ ಹುನ್ನಾರ ಆತನದು. ಅತ್ಯುತ್ತಮ ಚಿಕಿತ್ಸೆಗಳನ್ನು ಆಕೆಗೆ ಕೊಡಿಸುತ್ತಾನೆ. ಆಕೆಯ ಬಗ್ಗೆ ತಿಳಿದ ಅವಳ ಸಹಚರರು ಆಕೆಯನ್ನು ರಕ್ಷಿಸಲು ಯತ್ನಿಸುತ್ತಾರೆ. ಆದರೆ ಈ ಪ್ರಯತ್ನದಲ್ಲಿ ಆಕೆಗೆ ಬಲವಾದ ಕತ್ತಿ ಏಟು ಬೀಳುತ್ತದೆ. ಇದರಿಂದ ಆಕೆ ಚೇತರಿಸಿಕೊಳ್ಳುವುದೇ ಇಲ್ಲ. ಅತ್ಯುತ್ತಮ ಚಿಕಿತ್ಸೆ ದೊರೆತರೂ ಸ್ವಲ್ಪ ದಿನಗಳಲ್ಲೇ ಆಕೆ ಸಾಯುತ್ತಾಳೆ.

ಭಾಯಿ ವೀರ್‌ಸಿಂಗ್ ಅವರ 'ಸುಂದರಿ' ಕಾದಂಬರಿಯನ್ನು ಪಂಜಾಬ್‌ನಲ್ಲಿ 19ನೇ ಶತಮಾನದಲ್ಲಿ ಧಾರ್ಮಿಕ ಸಮುದಾಯಗಳ ಸಂರಚನೆಯ ಹಿನ್ನೆಲೆಯಲ್ಲಿ ನೋಡಬೇಕು, ಬ್ರಿಟಿಷ್ ಆಳ್ವಿಕೆ ಬಲಗೊಂಡಿತ್ತು, ಕ್ರೈಸ್ತ ಮಿಷನರಿಗಳೂ ಮತಾಂತರ ಚಟುವಟಿಕೆ ಆರಂಭಿಸಿದ್ದರು. ಇದಕ್ಕೆ ಪ್ರತಿಕ್ರಿಯೆಯನ್ನು ಸಿಂಗ್ ಸಭಾ ಹೋರಾಟದ ರೂಪದಲ್ಲಿ ಕಾಣಬಹುದು. ಸಿಂಗ್ ಸಭಾ ಹೋರಾಟ ಹಾಗೂ ಆರ್ಯ ಸಮಾಜದ ಚಳವಳಿ ನಿಕಟ ಸಂಪರ್ಕವನ್ನು ಹೊಂದಿದ್ದು ಎರಡೂ ಸ್ಪರ್ಧಾತ್ಮಕ ಶಕ್ತಿಗಳಾಗಿ ಸಮುದಾಯಗಳ ಸಂರಚನೆಯನ್ನು ಹರಳು ಗಟ್ಟಿಸಿದವು,

ಮತ್ತೊಂದೆಡೆ ಮುಸ್ಲಿಮರು ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ದೂರವೇ ಉಳಿದರು. ಸಿಂಗ್‌ಸಭಾ ಹೋರಾಟದಲ್ಲಿ ಸೂಫಿ ಪರಂಪರೆಯ ಪ್ರಭಾವವೂ ಮಸಕಾಯಿತು. ಹಿಂದೂ ಇಸ್ಲಾಂ ಈ ಎಲ್ಲಾ ಇತರ ಧರ್ಮಗಳ ಪ್ರಭಾವಗಳನ್ನೂ ಮೀರಿ ಸಿಖ್ ಅಸ್ಮಿತೆಯನ್ನು ಮರು ಪಡೆಯಲು ಸಿಖ್ ಬುದ್ಧಿಜೀವಿಗಳು ಬಹಳ ಪರಿಶ್ರಮ ವಹಿಸಿದರು. ಈ ಪಥ್ಯದ ಬಹುಮುಖ್ಯ ಸಂಗತಿ ಎಂದರೆ ಸಿಖ್ ಅಸ್ಮಿತೆಯ ನಿರ್ವಚನವನ್ನು ಜೆಂಡರ್ ಮೂಲಕ ಮಾಡಲಾಗಿದೆ. ಧಾರ್ಮಿಕ ಸಮುದಾಯದ ಪ್ರಮುಖ ಕೇಂದ್ರ ಬಿಂದುವಾಗಿದ್ದಾಳೆ ಮಹಿಳೆ. ಸಮುದಾಯಕ್ಕಿರುವ ಬೆದರಿಕೆ ಹಿನ್ನೆಲೆಯಲ್ಲಿ ಆಕ್ರಮಣವನ್ನು ಮೊದಲು ಎದುರಿಸುವವಳು ಆಕೆಯೇ. ಸಮುದಾಯದ ನಿರ್ವಚನದಲ್ಲಿ ಮಹಿಳೆ ಕೇಂದ್ರ ಬಿಂದುವಾಗುತ್ತಾಳೆ. ಮಹಿಳೆಯ ಗೌರವವನ್ನು ಸಮುದಾಯ ರಕ್ಷಿಸ ಬಲ್ಲುದೆ? ತನ್ನ ಮಹಿಳೆಯ ಗೌರವದ ಸಮರ್ಥಕನಾಗಿ ಮಾತ್ರವಲ್ಲ ಎಲ್ಲಾ ಮಹಿಳೆಯರ ಗೌರವದ ಸಮರ್ಥಕನಾಗಿ ಸಿಖ್ ಅಸ್ಮಿತೆಯನ್ನು ಭಾಯಿ ವೀರ್‌ಸಿಂಗ್ ರ ಕಥಾನಕ ನಿರ್ವಚಿಸುತ್ತದೆ. ಇಂತಹ ಸಕಾರಾತ್ಮಕ ನಿರ್ವಚನ ಇತರ ಧಾರ್ಮಿಕ ಸಮುದಾಯಗಳನ್ನು ಮೀರುತ್ತದೆ. ಈ ಪ್ರಕ್ರಿಯೆಯಲ್ಲಿ ಜೆಂಡರ್ ಮೂಲಕ ಪರಂಪರೆಯೊಂದನ್ನು ಹಾಗೂ ಧಾರ್ಮಿಕ ಅಸ್ಮಿತೆಯನ್ನು ರೂಪಿಸಿ ದಂತಾಗಿದೆ.

*– (ಸಂಗ್ರಹಾನುವಾದ : ಸಿ.ಜಿ. ಮಂಜುಳಾ;*
*ಕೃಪೆ: ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*
*ಆಗಸ್ಟ್ 12–18, 2006)*

# 'ಶ್ರೀಮತಿ ಯಶೋದಾ ರಾಗೌ ಟ್ರಸ್ಟ್' ಹೊರತಂದಿರುವ ಒಂಬತ್ತು ಉಪಯುಕ್ತ ಪುಸ್ತಕಗಳು

● ಡಾ. ಸಿ.ಜಿ. ಉಷಾದೇವಿ



೧೯೯೮ರ ಸೆಪ್ಟೆಂಬರ್‌ನಲ್ಲಿ ಆಕಸ್ಮಿಕ ಮರಣವನ್ನಪ್ಪಿದ ಶ್ರೀಮತಿ ಕವಿತಾ ಅವರ ನೆನಪಿಗಾಗಿ 'ಶ್ರೀಮತಿ ಕವಿತಾ ಸ್ಮಾರಕ ಪ್ರಶಸ್ತಿ' ಹಾಗೂ ಅವರ ಹೆಸರಿನಲ್ಲಿ 'ಸ್ಮಾರಕ ಉಪನ್ಯಾಸ', ಉಪನ್ಯಾಸದ ವಿಷಯವನ್ನು ಚಿಕ್ಕ ಹೊತ್ತಿಗೆಯಾಗಿ ಪ್ರಕಟಿಸುವುದು ಎಂಬ ಯೋಜನೆಯ ಅಡಿಯಲ್ಲಿ 'ಶ್ರೀಮತಿ ಯಶೋದಾ ರಾಗೌ ಟ್ರಸ್ಟ್' (ಜಯಲಕ್ಷ್ಮಿಪುರಂ, ಮೈಸೂರು) ೧೯೯೯ರಲ್ಲಿ ಅಸ್ತಿತ್ವಕ್ಕೆ ಬಂದಿತು. ಡಾ. ರಾಮೇಗೌಡ (ರಾಗೌ) ಮತ್ತು ಶ್ರೀಮತಿ ಯಶೋದಾರವರ ಮಗಳು ಶ್ರೀಮತಿ ಕವಿತಾ ಅವರ ಆಕಸ್ಮಿಕ ಮರಣದ ದಾರುಣ ಶೋಕದ ಹಿನ್ನಲೆಯಲ್ಲಿ ಸಮಾಜದಲ್ಲಿನ ಎಲ್ಲ ಹೆಣ್ಣುಮಕ್ಕಳ ಬದುಕಿನ ಪರಿಸ್ಥಿತಿಯನ್ನು ಚಿಂತಿಸಿ ರಚನಾತ್ಮಕ ಕೆಲಸದಲ್ಲಿ ತೊಡಗಿಸಿಕೊಳ್ಳುವ ಕಡೆ ಅವರ ಮನಸ್ಸು ಹರಿಯಿತು. ಅದಕ್ಕಾಗಿ ಹೋರಾಟದ ಬದುಕನ್ನು ಆಯ್ಕೆ ಮಾಡಿಕೊಂಡು ಸದ್ದಿಲ್ಲದೆ ದುಡಿಯುತ್ತಿರುವ, ಸಾಮಾಜಿಕ, ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ಮಹತ್ವದ ಸಾಧನೆ ಗೈದವರನ್ನು ಗುರುತಿಸಿ ಪ್ರತಿವರ್ಷ ಕವಿತಾರ ಜನ್ಮದಿನವಾದ ಜುಲೈ ೨೪ರಂದು ಸನ್ಮಾನಿಸುವುದರ ಮುಖಾಂತರ ರಾಗೌ ದಂಪತಿ ಹಾಗೂ ಸಮಿತಿ ಸದಸ್ಯರು ಕವಿತಾ ಅವರನ್ನು ಸ್ಮರಿಸಿಕೊಳ್ಳುತ್ತಾರೆ. ಪ್ರಶಸ್ತಿ ಮೊತ್ತ ರೂ.೧೦,೦೦೦/–ವಾಗಿದ್ದು, ವಿಶೇಷ ಸಾಧನೆಗೈದ ಒಬ್ಬ ಮಹಿಳೆಗೆ ನೀಡಲಾಗುವುದು. ಮಹಿಳಾ ಸಮಸ್ಯೆಯ ವಿಷಯ ಕುರಿತ ಉಪನ್ಯಾಸ, ಮುಂದಿನ ವರ್ಷದ ಸಮಾರಂಭದ ಹೊತ್ತಿಗೆ ಅದರ ಪುಸ್ತಕ ರೂಪ. ಇದುವರೆಗೆ ೯ (ಒಂಬತ್ತು) ಪುಸ್ತಕಗಳು ಪ್ರಕಟಗೊಂಡಿವೆ. (೧೯೯೯ ರಿಂದ ೨೦೦೭ರವರೆಗೆ).

ಮಹಿಳಾ ಬದುಕಿನ ವಿವಿಧ ಮುಖಗಳ ಸಮಸ್ಯೆಗಳನ್ನು ಅದರ ಪರಿಹಾರವನ್ನು ಹಲವಾರು ವಿದ್ವಾಂಸರು ಈ ಕೆಳಕಂಡ ಕಿರುಹೊತ್ತಿಗೆಗಳಲ್ಲಿ ವಿಶ್ಲೇಷಿಸಿದ್ದಾರೆ.

ಕ್ರಮವಾಗಿ ೧೯೯೯ರಿಂದ ಈ ಶೀರ್ಷಿಕೆಯಡಿ ಪ್ರಕಟಗೊಂಡ ಪುಸ್ತಕಗಳು –

೧. **ಮಹಿಳೆ ಮತ್ತು ಆಸ್ತಿ ಹಕ್ಕು** – ಹೇಮಲತಾ ಮಹಿಷಿ, ೧೯೯೯, ಬೆಲೆ ರೂ.೨೦/–,
೨. **ಮಹಿಳೆ ಮತ್ತು ಕೌಟುಂಬಿಕ ಹಿಂಸೆ** – ಡಾ. ಆರ್. ಇಂದಿರಾ, ೨೦೦೦, ಬೆಲೆ ರೂ.೩೦/–,
೩. **ಭೂಮಿತೂಕದ ಕಣ್ಣೀರು** – ಶಿವರಾಮು ಕಾಡನಕುಪ್ಪೆ, ೨೦೦೧, ಬೆಲೆ ೨೫/–,
೪. **ಮಹಿಳೆ ಮತ್ತು ಮಾಧ್ಯಮ** – ಡಾ. ಎನ್. ಉಷಾರಾಣಿ, ೨೦೦೨,
೫. **ಮಹಿಳೆ ಮತ್ತು ಮಾನವತೆ** – ಡಾ. ವಿಜಯಾ ದಬ್ಬೆ, ೨೦೦೩
೬. **ಮಹಿಳೆ ಮತ್ತು ಕಾನೂನು** – ವಿ.ಹೆಚ್. ಗೌಡ, ೨೦೦೪,
೭. **ಮಹಿಳೆ ಮತ್ತು ಸಾಮಾಜಿಕತೆ** – ಡಾ. ಎನ್.ಕೆ. ಕೋದಂಡರಾಮ, ೨೦೦೫, ಬೆಲೆ ರೂ.೪೦/–,
೮. **ಮಹಿಳೆ ಮತ್ತು ಅಭಿವೃದ್ಧಿ** – ಡಾ. ಸಿ.ಕೆ. ರೇಣುಕಾರ್ಯ, ೨೦೦೬, ಬೆಲೆ ರೂ.೩೫/–,
೯. **ಮಹಿಳೆ ಮತ್ತು ರಾಜಕಾರಣ** – ಡಾ. ಎಚ್.ಎಂ. ರಾಜಶೇಖರ್, ೨೦೦೭, ಬೆಲೆ ರೂ.೩೦/–,

ಈ ಎಲ್ಲ ಹೊತ್ತಿಗೆಗಳು ಸಮಾಜದಲ್ಲಿನ ಮಹಿಳೆಯ ಸ್ಥಾನಮಾನವನ್ನು, ವಾಸ್ತವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮಹಿಳಾ ಬದುಕನ್ನು ತೆರೆದಿಡುತ್ತವೆ. ಹೆಸರಾಂತ ವಕೀಲರಾದ ಹೇಮಲತಾ ಮಹಿಷಿ ಅವರು "ಮಹಿಳೆ ಮತ್ತು ಆಸ್ತಿಹಕ್ಕು" ಪುಸ್ತಕದಲ್ಲಿ ಮಹಿಳಾ ಕಾನೂನುಗಳನ್ನು ಪರಿಚಯಿಸುತ್ತಾರೆ. ಹಿಂದೂ ಸ್ತ್ರೀಯರ ಆಸ್ತಿ ಹಕ್ಕನ್ನು ಕುರಿತು ಅದರ ಉಗಮ, ಬೆಳವಣಿಗೆಯನ್ನು ಗುರುತಿಸುತ್ತಾ ಹಿಂದೂ ಕಾನೂನಿನ ಮೂಲವೇ 'ಧರ್ಮ'ವಾಗಿದ್ದು, ಕಾಲಕಾಲಕ್ಕೆ ಕಾನೂನು ತನ್ನ ಅರ್ಥವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ; ವಿವಾಹ, ಆಸ್ತಿಹಕ್ಕು, ಮಕ್ಕಳ ವಿಷಯ ಎಲ್ಲಕ್ಕೂ ಈ ಧಾರ್ಮಿಕ, ನೈತಿಕ ಆಯಾಮದ ವಿವರಗಳನ್ನು ನೀಡಿದ್ದಾರೆ. ಹಿಂದೂ ಸ್ತ್ರೀಯರಿಗೆ ಸಂಬಂಧಿಸಿದಂತೆ ಕಾನೂನಿನಲ್ಲಿ ತಿದ್ದುಪಡಿಗಳು ಆಗಿದ್ದರೂ ನಿಜಜೀವನದಲ್ಲಿ ಕಾನೂನು ಅನುಷ್ಠಾನಗೊಳ್ಳದ ಪರಿಸ್ಥಿತಿ, ಪಿತೃ ಪ್ರಧಾನ ವ್ಯವಸ್ಥೆಯ ನ್ಯೂನತೆಗಳು, 'ಸಮಾನತೆಯ ತತ್ವವನ್ನು ಒಪ್ಪಿಕೊಳ್ಳದ ಮನಃಸ್ಥಿತಿ–ಎಲ್ಲ ತಜ್ಞವಿವರಗಳನ್ನೂ ಐತಿಹಾಸಿಕ ನೆಲೆಯಲ್ಲಿ ಗುರುತಿಸಿದ್ದಾರೆ. ಪ್ರಸಿದ್ಧ ಸಮಾಜ ಶಾಸ್ತ್ರಜ್ಞೆ ಡಾ. ಆರ್. ಇಂದಿರಾ ಅವರು 'ಮಹಿಳೆ ಮತ್ತು ಕೌಟುಂಬಿಕ ಹಿಂಸೆ' ಪುಸ್ತಕದಲ್ಲಿ ಕುಟುಂಬದೊಳಗಿನ ಹಿಂಸೆ, ದೌರ್ಜನ್ಯಗಳು ಹೇಗೆ ನಡೆದಿವೆ, ನಡೆಯುತ್ತಿವೆ ಎಂಬುದರ ಮೇಲೆ ಬೆಳಕು ಚೆಲ್ಲಿದ್ದಾರೆ. "ಕೌಟುಂಬಿಕ ಹಿಂಸೆಯ ವಿರುದ್ಧ ಇಂದು ನಡೆಯಬೇಕಾಗಿರುವುದು ಒಂದು ಜನಾಂದೋಲನ....ಕುಟುಂಬದ ಒಳಗೆ ಮತ್ತು ಹೊರಗೆ ನಡೆಯುತ್ತಿರುವ ಹೋರಾಟ ಸರ್ವವ್ಯಾಪಿಯಾಗಲಿ" ಎಂಬ ಆಶಯಗಳು ಈ ಕೃತಿಯಲ್ಲಿವೆ. ಕೌಟುಂಬಿಕ ಹಿಂಸೆಯನ್ನು ಕುರಿತಂತೆ ಗಂಭೀರ ಆಲೋಚನೆಗೆ, ಇದರ ವಿರುದ್ಧ ಕಾರ್ಯಾಚರಣೆಗೆ ಈ ಕೃತಿ ಪ್ರೇರಣೆ ನೀಡಬೇಕೆಂಬ ಕಾಳಜಿ ಲೇಖಕರದಾಗಿದೆ. ಹೆಣ್ಣು ಭ್ರೂಣ ಹತ್ಯೆ, ಹೆಣ್ಣುಶಿಶುಹತ್ಯೆ, ಕುಟುಂಬದಲ್ಲಿ ಲಿಂಗ ವ್ಯವಸ್ಥೆಯನ್ನಾಧರಿಸಿದ ಸಾಮಾಜೀಕರಣ, ಕುಟುಂಬದ ಸಂಪನ್ಮೂಲ ಹಂಚಿಕೆಯಲ್ಲಿ ತಾರತಮ್ಯ, ವಿವಾಹ ಮತ್ತು ಕೌಟುಂಬಿಕ ಹಿಂಸೆ, ವರದಕ್ಷಿಣೆ ಸಂಬಂಧಿ ಹಿಂಸೆ, ಕೌಟುಂಬಿಕ ಹಿಂಸೆಯ ಇತರ ಮುಖಗಳು ಎಂದು ವಿಭಾಗಿಸಿಕೊಂಡು, ಈ ಹಿಂಸೆಗೆ ಏನು ಕಾರಣ ಎಂದು ಪ್ರಶ್ನಿಸುತ್ತಾ, 'ಪುರುಷ ಪ್ರಧಾನ ಸಂಸ್ಕೃತಿ' ಎನ್ನುತ್ತಾರೆ. ಕಾನೂನುಗಳ ವೈಫಲ್ಯದಿಂದಾಗಿ ಹೆಣ್ಣಿಗೆ ಸಾಮಾಜಿಕ ಭದ್ರತೆಯ ಕೊರತೆ ಎನ್ನುತ್ತಾ ಈ ಕೌಟುಂಬಿಕ ಹಿಂಸೆಯನ್ನು ಎದುರಿಸಲು ಮಹಿಳೆಯನ್ನು ಹೇಗೆ ಸಶಕ್ತಗೊಳಿಸಬೇಕು ಎಂದು ಚರ್ಚಿಸುತ್ತಾರೆ.

ಅದಕ್ಕಾಗಿ ಸ್ತ್ರೀ ವಿರೋಧಿ ಪ್ರವೃತ್ತಿಗಳು, ಸ್ತ್ರೀ ಬಗೆಗಿನ, ದ್ವಂದ್ವ ನಿಲುವುಗಳು ಮುಂತಾದವುಗಳೆಲ್ಲ ಮೂಲಭೂತ ಬದಲಾವಣೆಗೊಳಪಡಬೇಕು ಎನ್ನುತ್ತಾರೆ. ಸಾಮಾಜಿಕ ಭದ್ರತಾ ವ್ಯವಸ್ಥೆಯ ಕೊರತೆಯೇ ಕೌಟುಂಬಿಕ ಹಿಂಸೆಯ ಅನೇಕ ಪ್ರಕರಣಗಳಿಗೆ ಕಾರಣವಾಗಿ ದೌರ್ಜನ್ಯ, ಹಿಂಸೆಗೆ ಮಹಿಳೆ ಬಲಿಯಾಗುವುದನ್ನು ಸರಳವೂ, ಸಶಕ್ತವೂ ಆದ ಬರವಣಿಗೆಯಲ್ಲಿ ದಾಖಲಿಸುತ್ತಾರೆ.

ದುಡಿವ ಮಹಿಳೆ ಕುರಿತ ವೈಚಾರಿಕ ಬರಹವೆಂಬ ಸೂಚನೆಯಡಿ 'ಭೂಮಿ ತೂಕದ ಕಣ್ಣೀರು' ಎಂಬ ರೂಪಕ ಭಾಷೆಯಲ್ಲಿ ಶಿವರಾಮು ಕಾಡನಕುಪ್ಪೆ ಅವರು ದುಡಿವ ಮಹಿಳಾ ಬದುಕಿನ ಸಮಸ್ಯೆಯನ್ನು ವಿಶ್ಲೇಷಿಸಿದ್ದಾರೆ. ಆರು ಅಧ್ಯಾಯಗಳಲ್ಲಿ ಗ್ರಾಮ ಮಹಿಳೆ, ದುಡಿವ ಮಹಿಳೆ, ಮನೆಗೆಲಸದ ಮಹಿಳೆ, ವೇಶ್ಯಾಸ್ತ್ರೀಯರ ಬದುಕು–ಬವಣೆ, ಅವಿವಾಹಿತ ಮಹಿಳಾ ಬದುಕು–ಹೀಗೆ ವಿಭಾಗಿಸಿಕೊಂಡು ಮಹಿಳಾ ಸಮಸ್ಯೆಗಳನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಶಕ್ತಿಯ ಮಹತ್ವವನ್ನು ಗುರುತಿಸುತ್ತಾ, ಪುರುಷ ಪ್ರಧಾನ ಮೌಲ್ಯಗಳು ಈ ಬದುಕನ್ನು ಹೇಗೆ ತಪ್ಪಗೊಳಿಸಿವೆ ಎಂಬುದನ್ನು ಗುರುತಿಸಿದ್ದಾರೆ.




ಡಾ॥ ವಿಜಯಾದಬ್ಬೆಯವರ 'ಮಹಿಳೆ ಮತ್ತು ಮಾನವತೆ' ಕೃತಿಯು 'ಮಹಿಳಾ ಸಮಸ್ಯೆಗಳನ್ನು, ಅವುಗಳ ಪರಿಹಾರೋಪಾಯಗಳನ್ನು ತುಂಬಾ ಆಪ್ತವಾಗಿ ಚಿಂತಿಸುತ್ತದೆ. ಲಿಂಗ ಅಸಮಾನತೆಯ ಬಗೆಗಿನ ವಿವರಗಳನ್ನು ಇಲ್ಲಿನ ಲೇಖನಗಳು ತೆರೆದಿಡುತ್ತವೆ. ಸ್ತ್ರೀ ಸ್ವಾತಂತ್ರ್ಯ ಮತ್ತು ಸಮಾನತೆ ದೊರೆಯದೆ ಆರೋಗ್ಯಕರವಾದ ಸಮಾಜ ಸೃಷ್ಟಿಯಾಗಲು ಸಾಧ್ಯವಿಲ್ಲವೆಂಬ ಆಶಯವನ್ನು ಇಲ್ಲಿಯ ಲೇಖನಗಳು ಪ್ರತಿಪಾದಿಸುತ್ತವೆ. ಎಂದು ಡಾ. ರಾಗೌ ಮುನ್ನುಡಿಯಲ್ಲಿ ನುಡಿದಿದ್ದಾರೆ.

ಬಾಲ್ಯವಿವಾಹ, ಸ್ವಾತಂತ್ರ್ಯದ ಅರಿವಿದ್ದ ಅಬ್ಬಕ್ಕ, ಅತ್ಯಾಚಾರದ ಬಗ್ಗೆ, ವೇಶ್ಯಾವೃತ್ತಿ, ಹುಸಿ ಮದುವೆಯ ದುರಂತ, ರಾಜಕೀಯದಲ್ಲಿ ಮಹಿಳಾ ಪ್ರಾತಿನಿಧ್ಯ, ರಾಮಾಯಣದ ಲೇಖಕಿ ಹೆಚ್.ವಿ. ಸಾವಿತ್ರಮ್ಮ, ಜೋಗಿನಿಯರು, ಅತ್ತಿಮಬ್ಬೆ ಪ್ರಶಸ್ತಿ ಪುರಸ್ಕೃತೆ ವೈದೇಹಿಯವರ ಬರಹಗಳ ಬಗ್ಗೆ, ಮಹಿಳಾ ಕಾರಾಗೃಹ, ಮಹಿಳಾ ಶಿಕ್ಷಣ, ವರದಕ್ಷಿಣೆ, ಜಾಹಿರಾತಿನಲ್ಲಿ ಹೆಣ್ಣು, ಕುಟುಂಬ, ಸಮಾಜದಲ್ಲಿ ಮಹಿಳೆ ಕುರಿತಂತೆ ಆಗಬೇಕಾದ ಮೌಲಿಕ ಬದಲಾವಣೆ–ಹೀಗೆ ಹಲವಾರು ದಿಸೆಯಲ್ಲಿ ಚಿಂತಿಸಿರುವ ಹದಿನೈದು ಅಧ್ಯಾಯಗಳನ್ನೊಳಗೊಂಡ ಬರೆಹಗಳು ಇಲ್ಲಿವೆ.

ಡಾ. ಎನ್.ಉಷಾರಾಣಿಯವರ 'ಮಹಿಳೆ ಮತ್ತು ಮಾಧ್ಯಮ' ಕೃತಿಯಲ್ಲಿ ಮಾಧ್ಯಮಗಳಲ್ಲಿ ಮಹಿಳೆಯ ಚಿತ್ರಣವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಭಾರತದ ಮೊದಲ ಮಹಿಳಾ ಪತ್ರಕರ್ತರು ಸ್ವಾತಂತ್ರ್ಯ ಪೂರ್ವದಲ್ಲೇ ಗಮನ ಸೆಳೆದಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲೂ ಕೃಷಿ ಮಾಡಿದ್ದರಿಂದ ಸೃಜನಶೀಲತೆ, ಉತ್ತಮ ಭಾಷಾಶೈಲಿ ಮತ್ತು ಅಭಿರುಚಿಯನ್ನು ಪತ್ರಿಕೋದ್ಯಮದಲ್ಲೂ ಬೆಳೆಸಿದ್ದಾರೆ. ಪತ್ರಕರ್ತರಾಗಿ ಇಡೀ ಪತ್ರಿಕೆಯ ಸಂಪಾದಕತ್ವವನ್ನು ಒಂಟಿಯಾಗಿ ನಿಭಾಯಿಸಿದ್ದರೂ ಅವರನ್ನು 'ಪತ್ರಕರ್ತ' ರೆಂದು ಗುರುತಿಸದೆ 'ಲೇಖಕಿ'ಯರೆಂದೇ ಪರಿಗಣಿಸಲಾಗಿದ್ದು, 'ಪತ್ರಕರ್ತೆ' ಎಂಬ ಅಂಕಿತ ದಕ್ಕಲು ಮತ್ತೆ ಹಲವಾರು ವರ್ಷಗಳು ಕಾಯಬೇಕಾದ ಸ್ಥಿತಿ...ಈ ಮುಂತಾದ ವಿವರಗಳನ್ನು, ಪತ್ರಿಕೋದ್ಯಮದಲ್ಲಿ ಮಹಿಳೆ ನಡೆದುಬಂದ ದಾರಿಯ ಹೆಜ್ಜೆ ಗುರುತನ್ನು ಹಾಗೂ ಮಹಿಳಾ ಸಾಧನೆಗಳನ್ನು ಗುರುತಿಸಿದ್ದಾರೆ. ಕನ್ನಡ ಪತ್ರಿಕೋದ್ಯಮದಲ್ಲಿ ಮೊದಲ ಮಹಿಳಾ ಪತ್ರಕರ್ತೆಯರು ಅವರ ಕಾರ್ಯವ್ಯಾಪ್ತಿ ಎಲ್ಲವನ್ನು ಐತಿಹಾಸಿಕವಾಗಿ ದಾಖಲಿಸಿದ್ದಾರೆ. ೧೯೭೦ ರಿಂದೀಚೆಗೆ ಮಹಿಳಾ ಪತ್ರಕರ್ತರ ಸಾಧನೆಗಳನ್ನು ದಾಖಲಿಸಿದ್ದಾರೆ. ಚಿತ್ರಾ ಸುಬ್ರಹ್ಮಣ್ಯಂ, ಸುಚೇತಾ ದಲಾಲ್, ಪುಷ್ಪ ಗಿರಿಮಾಜಿ, ಶೀಲಾಬರ್‌ಸೇ, ತವಲೀನ್‌ಸಿಂಗ್, ಅಮಿತಾಮಲ್ಲಿಕ್, ನಳಿನಿಸಿಂಗ್, ಮೃಣಾಲಿನಿ ಪಾಂಡೆ ಮುಂತಾದವರು ಪತ್ರಿಕೆಯಲ್ಲದೆ ದೂರದರ್ಶನ ಮುಂತಾದ ವಿದ್ಯುನ್ಮಾನ ಕ್ಷೇತ್ರದಲ್ಲೂ ಸಾಧನೆಗೈದಿದ್ದಾರೆ. 'ಮಹಿಳಾ ಪತ್ರಿಕೆಗಳು' ಮಹಿಳೆಯ ಬದುಕನ್ನು ಸುಧಾರಿಸುವುದರಲ್ಲಿ, ಬದಲಾಯಿಸುವುದರಲ್ಲಿ ಅವರ ಅಭಿರುಚಿಯನ್ನು ತಿದ್ದುವುದರಲ್ಲಿನ ಪಾತ್ರವೇನು? ಎಂಬುದನ್ನು ಗುರುತಿಸಿದ್ದಾರೆ. ಜಾಹಿರಾತು ಹೆಣ್ಣನ್ನು ಹೇಗೆ ಬಳಸಿಕೊಳ್ಳುತ್ತದೆ? ಟಿ.ವಿ. ಮಾಧ್ಯಮ ಮಹಿಳೆಯನ್ನು ಹೇಗೆ ಪ್ರದರ್ಶಿಸುತ್ತಿದೆ? ಹೊಸ ಸಂಪರ್ಕ ತಂತ್ರಜ್ಞಾನಗಳಾದ ಕಂಪೂಟರ್, ಟೆಲಿ ಕಮ್ಯುನಿಕೇಷನ್ ಮುಂತಾದ ಕ್ಷೇತ್ರದಲ್ಲಿ ಮಹಿಳಾ ಪ್ರತಿಭೆ ಪ್ರದರ್ಶನಗೊಂಡಿದ್ದನ್ನೂ ದಾಖಲಿಸಿದ್ದಾರೆ. ಹಾಗೆಯೇ ಮಹಿಳೆ ಎಲ್ಲೆಲ್ಲಿ ದುರುಪಯೋಗಕ್ಕೊಳಗಾಗಿದ್ದಾಳೆ ಎಂಬುದನ್ನೂ ವಿಶ್ಲೇಷಿಸಿದ್ದಾರೆ. ಡಾ॥ ರಾಗೌ "ಮಹಿಳೆಯರು ಎಲ್ಲ ಕ್ಷೇತ್ರಗಳಲ್ಲೂ ಪ್ರವೇಶಿಸಿ, ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಮಾಧ್ಯಮಗಳಲ್ಲಿ ಅಧಿಕ ಅವಕಾಶವಿದ್ದು, ಅವರ ಪಾತ್ರ ಪ್ರಭಾವಗಳು ಹೆಚ್ಚುತ್ತಿವೆ, ಆದರೂ ಮಾಧ್ಯಮಗಳಲ್ಲಿ ಮಹಿಳೆಯರನ್ನು ನೋಡುವ ರೀತಿಯಲ್ಲಿ ಬದಲಾಗಬೇಕಾಗಿದೆ" ಎಂದು ತಿಳಿಸುತ್ತಾ, ಈ ಕೃತಿ ಆ ನಿಟ್ಟಿನಲ್ಲಿ ಉಪಯುಕ್ತವಾಗುತ್ತದೆ ಎಂದಿದ್ದಾರೆ.

"ಮಹಿಳೆ ಮತ್ತು ಸಾಮಾಜಿಕತೆ" ಕೃತಿಯನ್ನು ಡಾ॥ ಎನ್.ಕೆ. ಕೋದಂಡರಾಮ ರಚಿಸಿದ್ದಾರೆ. ಇಂದು ಮಹಿಳೆ ಎದುರಿಸುತ್ತಿರುವ ಸಾಮಾಜಿಕ ಸವಾಲುಗಳನ್ನು ಈ ಕೃತಿ ಹಿಡಿದಿಡುತ್ತದೆ. "ಸಮಾನ ನೆಲೆಯಲ್ಲಿ ಜೀವಿಸಬೇಕಾದ ಮಹಿಳೆ ಮತ್ತು ಪುರುಷ, ಅದು ಸಾಧ್ಯವಾಗದ ಕಾರಣ ಜೀವನಗತಿಯಲ್ಲಿ ಬೇರೆ ಬೇರೆ ಕವಲುಗಳಾಗಿಯೇ ತಮ್ಮನ್ನು ಪೊರೆದುಕೊಂಡು ಬಂದಿದ್ದಾರೆ. ಇಬ್ಬರ ನಡುವೆ ಅಸಮಾನತೆ

'ಸಹಜ'ವೆನ್ನುವಷ್ಟು ಬೆಳವಣಿಗೆ ಪಡೆದಿದೆ. ಇಂತಹ 'ಲಿಂಗ ತಾರತಮ್ಯ' ಮನು ಪರಂಪರೆಗೆ ಗೌರವ ತರುವಂತಹುದ್ದಲ್ಲ" ಎಂಬುದು ಲೇಖಕರ ಕಳಕಳಿಯ ನುಡಿ. "ಜನಸಂಖ್ಯೆಯ ಅರ್ಧ ಭಾಗವಾಗಿದ್ದ ಮಹಿಳೆಯನ್ನು ಹಿಡಿತದಲ್ಲಿಟ್ಟುಕೊಂಡು ಪರಂಪರೆ ಬೆಳೆದು ಬರಲು ಕಾರಣ ಏನು ಎಂಬುದಕ್ಕೆ ಬಹುಶಃ ಎಲ್ಲ ಅಧ್ಯಯನ ಮಾದರಿಗಳೂ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯನ್ನು ಕಾರಣ ಮಾಡುತ್ತವೆ. ಆದುದರಿಂದ ಈ ಸಾಮಾಜಿಕ ಹಿನ್ನೆಲೆಯನ್ನು ಗಮನಿಸಬೇಕು. ಮಹಿಳೆಯರ ಧೀಮಂತಿಕೆಯನ್ನು ಬಂಧಿಸಿಟ್ಟ ವ್ಯವಸ್ಥೆಯನ್ನು ಸಮಗ್ರವಾಗಿ ಅರ್ಥೈಸಿಕೊಂಡು, ಆಕೆಯನ್ನು ವೈಯಕ್ತಿಕ ನೆಲೆಯಲ್ಲಿ ಮತ್ತಷ್ಟು ಗಟ್ಟಿಯಾಗಿ ಸ್ಥಾಪಿಸುತ್ತಾ ಸಾಮಾಜಿಕಗೊಳಿಸಬೇಕು..." ಎಂದು ಲೇಖಕರು ತಿಳಿಸುತ್ತಾರೆ. ಪರಂಪರೆಯ ಸಿದ್ಧಮಾದರಿಗಳನ್ನು ಒಡೆಯುವುದರ ಮೂಲಕ ಸಲ್ಲಬಹುದಾದ ಒಂದು ತಾತ್ವಿಕತೆಯನ್ನು ಸಿದ್ಧಪಡಿಸಿ, ಈ ಗೃಹೀತ ಧೋರಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಗಮನಿಸಬೇಕು ಎಂದೂ ಅವರು ಅಭಿಪ್ರಾಯ ಪಟ್ಟಿದ್ದಾರೆ. "ಮಹಿಳಾ ಅಧ್ಯಯನವೆಂದರೆ ಪುರುಷ ವಿರೋಧಿ ಅಧ್ಯಯನವೆಂಬ ತಪ್ಪುಕಲ್ಪನೆ ಈಗಲೂ ಉಳಿದುಕೊಂಡಿದೆ. ಈ ಅವಿವೇಕವನ್ನು ಗಮನಿಸಿ, ಪೂರ್ವ ಗ್ರಹೀತ ವಿಚಾರಗಳಿಗೆ ಪ್ರಾಧಾನ್ಯ ನೀಡದೆ ಸತ್ಯವನ್ನು ಮರೆಮಾಚದೆ ವಿವೇಚಿಸಬೇಕಿದೆ" ಎಂದಿದ್ದಾರೆ.

"ಮಹಿಳೆ ಮತ್ತು ಕಾನೂನು" ಕೃತಿಯಲ್ಲಿ ವಿ.ಹೆಚ್.ಗೌಡ ಅವರು ಕಾನೂನಿನ ಅಡಿಯಲ್ಲಿ ಮಹಿಳೆಯರ ಬದುಕನ್ನು ವಿಶ್ಲೇಷಣೆಗೆ ಒಳಗು ಮಾಡಿದ್ದಾರೆ. "ಮಹಿಳೆಗೆ ಸಂಬಂಧಿಸಿದ ಕಾನೂನುಗಳ ಅನುಷ್ಠಾನ, ಅವುಗಳ ಪರಿಣಾಮ ವಿವೇಚನೆ ಈ ಪುಸ್ತಕದ ಉದ್ದೇಶ. ಮಹಿಳೆಯರ ಉದ್ಧಾರ ಎಷ್ಟಾಯಿತು ಎಂಬುದರ ಮೌಲ್ಯಮಾಪನ ಸಹ ಈ ಕೃತಿಯಲ್ಲಿದೆ. ಈ ಕೃತಿಯ ಉದ್ದಕ್ಕೂ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು ಸ್ಪಷ್ಟವಾಗಿ ಬಿಂಬಿತವಾಗಿವೆ" ಎಂದು ಡಾ॥ ರಾಗೌ ಪ್ರಾಸ್ತಾವಿಕ ನುಡಿಗಳನ್ನಾಡಿದ್ದಾರೆ.

ಮಹಿಳೆ ಮತ್ತು ಕಾನೂನು, ಪಂಚಾಯಿತಿ, ಪುರಸಭೆಗಳಲ್ಲಿ ಮಹಿಳೆಯರ ಪಾಲು, ಮಹಿಳೆಯರ ವೈಯಕ್ತಿಕ ಕಾನೂನುಗಳು, ವರದಕ್ಷಿಣೆ ನಿಷೇಧ ಕಾಯ್ದೆ, ಆಸ್ತಿ-ಕಾನೂನುಗಳು, ಮಹಿಳಾ ಮೀಸಲಾತಿ ಮಸೂದೆ ಎಂಬ ವಿಂಗಡಣೆಯಲ್ಲಿ ಸಂವಿಧಾನಾತ್ಮಕವಾದ ತಿಳಿವಳಿಕೆಯನ್ನು ಮಹಿಳೆಗೆ ಸಂಬಂಧಿಸಿದಂತೆ ಈ ಕೃತಿ ನೀಡುತ್ತದೆ.

ಡಾ॥ ಸಿ.ಕೆ. ರೇಣುಕಾರ್ಯ ಹೆಸರಾದ ಅರ್ಥಶಾಸ್ತ್ರಜ್ಞರು. ಮಹಿಳಾ ಸಮಸ್ಯೆಯನ್ನು ಅವಳ ಅಭಿವೃದ್ಧಿಯನ್ನು ಅರ್ಥಶಾಸ್ತ್ರದ ದೃಷ್ಟಿಯಿಂದ 'ಮಹಿಳೆ ಮತ್ತು ಅಭಿವೃದ್ಧಿ' ಕೃತಿಯಲ್ಲಿ ಚಿಂತಿಸಿದ್ದಾರೆ. ಬದಲಾಗುತ್ತಿರುವ ಜಾಗತಿಕ ವಾತಾವರಣದಲ್ಲಿ ಭಾರತೀಯ ಮಹಿಳೆಯ ಸ್ಥಿತಿಗತಿಗಳನ್ನು ಈ ಕೃತಿ ಚರ್ಚಿಸುತ್ತದೆ. ತುರ್ತಿನ ವಿಷಯವಾದ 'ಮಹಿಳಾ ಸಬಲೀಕರಣ'ದ ವಿಚಾರವೂ ಈ ಕೃತಿಯ ಕೇಂದ್ರ ವಿಷಯವಾಗಿದೆ.

ಏಳು ಅಧ್ಯಾಯವನ್ನೊಳಗೊಂಡ ಈ ಕೃತಿ 'ಮಹಿಳಾ ಸಮಸ್ಯೆ ತುಂಬಾ ಜಟಿಲವಾದುದು, ಸಮಸ್ಯೆಗಳನ್ನು ಚರ್ಚಿಸುವಷ್ಟು ಸುಲಭವಾಗಿ ಪರಿಹಾರ ಸೂಚಿಸುವುದು ಕಷ್ಟ. ಮಹಿಳಾ ಸಮಸ್ಯೆ ತಾತ್ವಿಕ ಮಟ್ಟದಲ್ಲಿ ಗಟ್ಟಿಯಾಗುತ್ತಾ ಹೋಗುತ್ತಿದೆಯೇ ಹೊರತು ಪರಿಹಾರದ ಮಟ್ಟದಲ್ಲಿ ಖಂಡಿತಾ ಅಲ್ಲ...ನಮ್ಮ ದೇಶದಲ್ಲಿ ಮಹಿಳೆ ಇಂದಿಗೂ ದ್ವಿತೀಯ ದರ್ಜೆಯ ಪ್ರಜೆಯೇ ಎಂಬ ಕಟು ಸತ್ಯ ಒಪ್ಪಿಕೊಳ್ಳಬೇಕಾಗಿದೆ' ಎಂದು ಲೇಖಕರು ವಾಸ್ತವ ಸ್ಥಿತಿಗೆ ಕನ್ನಡಿ ಹಿಡಿದಿದ್ದಾರೆ. ಮಹಿಳೆ, ಮಾಹಿತಿ ತಂತ್ರಜ್ಞಾನ ಮತ್ತು ಜಾಗತೀಕರಣ, ಧರ್ಮ ಮತ್ತು ಪ್ರಜನನ, ಭಾರತೀಯ ಮತ್ತು ವೈಜ್ಞಾನಿಕ ನೀತಿ, ಮಹಿಳೆ ಮತ್ತು ಕೃಷಿ ಕ್ಷೇತ್ರ, ರಾಜಕೀಯ ಅಧಿಕಾರದಲ್ಲಿ ಮಹಿಳೆ, ಮಿಲೇನಿಯಂ ಅಭಿವೃದ್ಧಿ ಗುರಿಗಳು, ಸ್ತ್ರೀಯರು ಮತ್ತು ಹೆಣ್ಣುಮಕ್ಕಳ ಅಪೌಷ್ಠಿಕತೆ ಎಂಬ ಅಧ್ಯಾಯಗಳಲ್ಲಿ ಮಹಿಳೆಯ ಸಮಸ್ಯೆ, ಅಭಿವೃದ್ಧಿಯನ್ನು ಗುರುತಿಸಿದ್ದಾರೆ. ಸಮಕಾಲೀನ ಬದುಕಲ್ಲಿ ಮಹಿಳೆಯ ಸಾಧನಾ ಕ್ಷೇತ್ರ ವಿಸ್ತರಿಸಿದಂತೆ ಅವಳ ಸಮಸ್ಯೆಗಳು ಹೇಗೆ ಕ್ಲಿಷ್ಟ ಹಾಗೂ ಸೂಕ್ಷ್ಮಗೊಂಡಿವೆ ಎಂಬುದನ್ನು ರೇಣುಕಾರ್ಯರು ಸಮರ್ಥವಾಗಿ ಪರಿಶೀಲಿಸಿದ್ದಾರೆ.

ಶ್ರೀಮತಿ ಕವಿತಾ ಸ್ಮಾರಕ ಉಪನ್ಯಾಸ ಮಾಲೆಯ ಒಂಬತ್ತನೆಯ ಕೃತಿಯಾಗಿ 'ಮಹಿಳೆ ಮತ್ತು ರಾಜಕಾರಣ' ಪ್ರಕಟಗೊಂಡಿದೆ. ಸಂವಿಧಾನ ತಜ್ಞರೆಂದು ಪರಿಚಿತರಾಗಿರುವ ಡಾ॥ ಹೆಚ್.ಎಂ. ರಾಜಶೇಖರ ಅವರು ಮಹಿಳೆಯ ರಾಜಕೀಯ ಇತಿಹಾಸವನ್ನು ವಿಶ್ಲೇಷಿಸಿದ್ದಾರೆ.

ಮಹಿಳೆಯರ ರಾಜಕೀಯ ಹಕ್ಕುಗಳಿಗಾಗಿ ಹೋರಾಟ, ವಿಶ್ವರಾಜಕಾರಣದಲ್ಲಿ ಮಹಿಳೆಯರು, ಭಾರತದ ರಾಜಕಾರಣದಲ್ಲಿ ಮಹಿಳೆಯರು, ಕರ್ನಾಟಕ ರಾಜಕಾರಣದಲ್ಲಿ ಮಹಿಳೆಯರು, ಉಪಸಂಹಾರ ಎಂದು ವಿಂಗಡಿಸಿಕೊಂಡು ಭಾರತದಲ್ಲಿ ಹಾಗೂ ಇತರ ಅಭಿವೃದ್ಧಿಶೀಲ ದೇಶಗಳಲ್ಲಿ ಮಹಿಳೆ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ – ಹೀಗೆ ಎಲ್ಲ ರೀತಿಯ ಅಸಮಾನತೆಗೆ ಒಳಗಾಗಿ ಎರಡನೆ ದರ್ಜೆ ಪ್ರಜೆಯಾಗಿಯೇ ಬದುಕಿರುವುದು, ಇದಕ್ಕಾಗಿ ನಿರಂತರ ಹೋರಾಟ ವಿಶ್ವದಲ್ಲಿ ನಡೆದಿರುವುದು, ತಮ್ಮ ರಾಜಕೀಯ ಹಕ್ಕುಗಳಿಗಾಗಿ ಹೋರಾಡುವ ಅನಿವಾರ್ಯತೆ, ಆದರೂ ನಿರಾಶಾದಾಯಕ ಪರಿಸ್ಥಿತಿ ಮುಂತಾದ ವಿವರಗಳನ್ನೊಳಗೊಂಡಿರುವ ಈ ಕೃತಿ ಮಾಹಿತಿ ಪೂರ್ಣವಾಗಿದೆ. ಹಲವು ಅಂಕಿ-ಅಂಶಗಳನ್ನು ದಾಖಲಿಸುತ್ತಾ ಮೂಲಭೂತ ಸಾಮಾಜಿಕ ಮತ್ತು ಕೌಟುಂಬಿಕ ಬದಲಾವಣೆಗಳಿಲ್ಲದೆ ಮಹಿಳೆ ರಾಜಕೀಯ ಸ್ಥಾನಮಾನವನ್ನು ಪುರುಷ ಸಮಾನ ನೆಲೆಯಲ್ಲಿ ಪಡೆಯಲು ಸಾಧ್ಯವಿಲ್ಲ. ಅದಕ್ಕಾಗಿ ಇಪ್ಪತ್ತೊಂದನೇ ಶತಮಾನದಲ್ಲಿ ಪ್ರಜಾಪ್ರಭುತ್ವ ಸರ್ಕಾರಪದ್ಧತಿಯಲ್ಲಿ ಮಹಿಳೆಯು ಜಾಗೃತಗೊಳ್ಳಲು ತಕ್ಕ ಪರಿಸರ, ಶೈಕ್ಷಣಿಕ ಸವಲತ್ತಿನ ಅಗತ್ಯವನ್ನು ಗುರುತಿಸುತ್ತಾರೆ. ಇದುವರೆಗೆ ನಡೆದ ಮಹಿಳಾ ಅಂತಾರಾಷ್ಟ್ರೀಯ ಸಮ್ಮೇಳನಗಳಲ್ಲಿ ಮಹಿಳೆಯ ನಾನಾ ಮುಖದ ಸಮಸ್ಯೆ, ಪರಿಹಾರಗಳ ಬಗ್ಗೆ ಚರ್ಚಿಸಲಾಗಿದೆ, ಇದಕ್ಕೆ ಪೂರಕವಾಗಿ 'ರಾಜಕೀಯ ಕ್ಷೇತ್ರ' ಮಹಿಳಾ ಬದುಕನ್ನು ಮಾತ್ರವಲ್ಲ, ಮಾನವ ಬದುಕನ್ನು ಆರೋಗ್ಯಪೂರ್ಣವಾಗಿ, ಶಾಂತಿಯುತವಾಗಿ ಮುನ್ನಡೆಸಲು ಮಹಿಳೆಗೂ ನೇತೃತ್ವ ವಹಿಸುವ ಅವಕಾಶಗಳು ಯಾವುದೇ ತಾರತಮ್ಯವಿಲ್ಲದೆ ಒದಗಿಸಬೇಕು ಎಂದಿದ್ದಾರೆ. ಅಂತಹ ಸಮಾನತಾ ಸಮಾಜ ನಿರ್ಮಾಣ ಮಾಡುವ ದಿಕ್ಕಿನಲ್ಲಿ 'ಶ್ರೀಮತಿ ಯಶೋದಾ ರಾಗೌ ಟ್ರಸ್ಟ್' ಪ್ರತಿವರ್ಷ ಏರ್ಪಡಿಸುತ್ತಿರುವ ಉಪನ್ಯಾಸ, ಕೃತಿ ಪ್ರಕಟಣೆ ಗಮನಾರ್ಹ ಅಂಶವಾಗಿವೆ. ಈ ಟ್ರಸ್ಟ್‌ನಿಂದ ಪ್ರಕಟಗೊಳ್ಳುತ್ತಿರುವ ಕೃತಿಗಳು ಮಹಿಳಾ ಅಧ್ಯಯನಕ್ಕೆ ಪಠ್ಯಪುಸ್ತಕಗಳ, ಆಕರ ಗ್ರಂಥಗಳ ಕೊರತೆಯನ್ನು ನೀಗಿಸುವ ಕೆಲಸವನ್ನು ಸದ್ದಿಲ್ಲದೆ ಮಾಡುತ್ತಾ ಬಂದಿವೆ.

ಈ ವರ್ಷದ ಸಂದರ್ಭದಲ್ಲಿ ೧೦ನೇ ಕೃತಿಯ ಜೊತೆಗೆ ಈ ಸ್ಮಾರಕ ಉಪನ್ಯಾಸಗಳನ್ನೆಲ್ಲ ಒಂದೇ ಸಂಪುಟದಲ್ಲಿ ತರುವ ಯೋಜನೆಯನ್ನು ಟ್ರಸ್ಟ್ ಹಮ್ಮಿಕೊಂಡಿದೆ. ಅದು ಮಹಿಳಾ ಅಧ್ಯಯನಕ್ಕೆ ಅರ್ಥಪೂರ್ಣ ಪರಾಮರ್ಶನ ಗ್ರಂಥವಾಗುವುದರಲ್ಲಿ ಸಂಶಯವಿಲ್ಲ. ❑

# ಸ್ವಾತಂತ್ರ್ಯೋತ್ತರ ಕನ್ನಡ ಮಹಿಳಾ ಕಾವ್ಯ

● ಡಾ. ವಿನಯಾ

(ಹಿಂದಿನ ಸಂಚಿಕೆಯಿಂದ)

**೩. ಪ್ರತಿ ಮಾದರಿಗಳ ನಿರ್ಮಾಣ**

ಭೂತ ಮತ್ತು ವರ್ತಮಾನಗಳ ಬಹುಮುಖಿ ನೆಲೆಗಳನ್ನು ಶೋಧಿಸಿಕೊಳ್ಳುವ ಮೂಲಕ ಮಹಿಳಾ ಸಂವೇದನೆ ಸ್ವ-ಅಸ್ತಿತ್ವ ಪ್ರಜ್ಞೆಯನ್ನು ಜಾಗೃತಗೊಳಿಸಿಕೊಂಡಿತು. ಈ ಸಂದರ್ಭದಲ್ಲಿ ಪುರುಷ ಪ್ರಧಾನ ಮೌಲ್ಯಗಳ ಸಂಕಥನವನ್ನು ಒಡೆದು ಮರುಮೌಲ್ಯಮಾಪನ ಮಾಡುವ ಕ್ರಿಯೆಯನ್ನು ಆರಂಭಿಸಲಾಯಿತು. ಪುರುಷ ಹಿತಾಸಕ್ತ 'ಸ್ತ್ರೀ ಮಾದರಿ'ಗಳು ಹೆಣ್ಣಿನ ಲೈಂಗಿಕ ಅಸ್ತಿತ್ವವನ್ನು ವೈಭವೀಕರಿಸುವ-ತುಚ್ಛೀಕರಿಸುವ ಸತ್ಯ ಅರಿವಾಯಿತು. ಇತಿಹಾಸ-ಪುರಾಣಗಳನ್ನು ಒಡೆದು ಕಟ್ಟುವ ಕಾಳಜಿ ಕಾವ್ಯ, ಕಥೆ, ಕಾದಂಬರಿಗಳಲ್ಲಿ ವ್ಯಕ್ತವಾಯಿತು. ಸ್ತ್ರೀವಾದಿ ಚಿಂತಕಿ ಸಿಮೋನ್ ದ ಬುವಾ 'ದಿ ಸೆಕೆಂಡ್ ಸೆಕ್ಸ್' ಎಂಬ ಕೃತಿಯಲ್ಲಿ ಮಹಿಳಾ ಚರಿತ್ರೆಯನ್ನು ಕಲ್ಪಿಸುವ ವಿಧಾನವನ್ನು ಪ್ರಸ್ತಾಪಿಸದ್ದಾಳೆಂದು ಡಾ. ಎಚ್.ಎಸ್. ಶ್ರೀಮತಿ ಮಹಿಳಾ ಸಾಹಿತ್ಯ ಚರಿತ್ರೆಯ ಪ್ರಸ್ತಾವನೆಯಲ್ಲಿ ಉಲ್ಲೇಖಿಸುತ್ತಾರೆ. "ಮಹಿಳಾ ಬದುಕಿಗೆ ಸಂಬಂಧಿಸಿದ ಎಲ್ಲ ದಾಖಲೆಗಳನ್ನು ಮರೆಮಾಡುವ, ನಾಶಮಾಡುವ ವಿಧಾನವನ್ನು ಅನುಸರಿಸುವ ಮೂಲಕವೇ ಈ ಪುರುಷ ಪ್ರಧಾನ ಸಮಾಜವು ಮಹಿಳಾ ಚರಿತ್ರೆಯನ್ನು ಅಸಾಧ್ಯವಾಗಿಸುತ್ತ ಬಂದಿದೆ. ಆದರೆ ಪುರುಷ ತನಗೇ ಅರಿವಿಲ್ಲದೆ ತಾನು ದೋಚಿದ ಈ ದಾಖಲೆಗಳನ್ನು ತಾನೇ ಕಟ್ಟಿದ ಪುರಾಣ, ಪುಣ್ಯಕಥೆ, ದಂತಕಥೆ, ಮಹಾಕಾವ್ಯಗಳಲ್ಲಿ ದಿನನಿತ್ಯದ ಬಳಕೆಯ ಭಾಷೆಗಳಲ್ಲಿ ಕೂಡ ಬೆರೆಸಿ ಇಟ್ಟುಬಿಟ್ಟಿದ್ದಾನೆ. ಆದರೆ ಈ ಪುರುಷ ಕಥಾನಕಗಳಲ್ಲಿ ದೊರೆಯುವ ಮಿಥ್‌ಗಳನ್ನು ವಿಶ್ಲೇಷಣೆ ಮಾಡುವ ಮೂಲಕ ಶೋಧಿಸುವುದು ಸಾಧ್ಯ". ಹೀಗೆ ಪುರುಷ ಕಥಾನಕಗಳ ಮಿಥ್‌ಗಳನ್ನು ಭಂಜಿಸುವ ಕೆಲಸವನ್ನು ಮಹಿಳಾ ಕಾವ್ಯ ಮಾಡಿದೆ. ಬಂಡಾಯ ಸಾಹಿತ್ಯದ ಪ್ರಧಾನ ಧಾರೆಯಲ್ಲಿ ನಡೆದ ಈ 'ಮೂರ್ತಿ ಭಂಜನ' ಪ್ರಕ್ರಿಯೆ ಕೂಡ ಸಾಕಷ್ಟು ಪ್ರೇರಣೆಯನ್ನೊದಗಿಸಿತು. ನಮ್ಮ ಸಾಂಸ್ಕೃತಿಕ ಕಥನಗಳಲ್ಲಿ ಹೆಣ್ಣು ದೇವತೆ-ರಾಕ್ಷಸಿಯಂತಹ ಸಿದ್ಧಪಡಿಯಚ್ಚಿನಲ್ಲಿ ರೂಪುಗೊಂಡಿರುತ್ತಿದ್ದಳು. ಇಂತಹ ಪಡಿಯಚ್ಚುಗಳನ್ನು ನಿರಾಕರಿಸಿ ಪ್ರತ್ಯೇಕ ಪ್ರತೀಕಗಳನ್ನು ಸೃಷ್ಟಿಸಲಾಯಿತು. ಅಕ್ಕ, ಸೀತೆ, ಸಾವಿತ್ರಿ, ದ್ರೌಪದಿ, ಊರ್ಮಿಳೆ, ಶಕುಂತಲೆ, ಅಮೃತಮತಿ, ಮಮ್ತಾಜ್ ಇಂತಹ ಪಾತ್ರಗಳನ್ನು ಮರುನಿರ್ಮಿಸುವ ಸಾಮರ್ಥ್ಯವನ್ನು ಮಹಿಳಾ ಕಾವ್ಯ ನಿಭಾಯಿಸಿದೆ. ಇದರಲ್ಲಿಯ ಜೀವವಿರೋಧಿ ನೆಲೆಗಳನ್ನು ನಿರಾಕರಿಸುವುದು ಮಹಿಳಾ ಕಾವ್ಯದ ಆದ್ಯತೆಯಾಗಿತ್ತು. 'ಅಮೃತಮತಿಯ ಸ್ವಗತ'ದಂತಹ ಸಂಕಲನಗಳನ್ನು ಈ ಹಿನ್ನೆಲೆಯಲ್ಲಿ ಗಮನಿಸಿಕೊಳ್ಳಬಹುದು. ಅಕ್ಕ ಮತ್ತು ಅಮೃತಮತಿ ಮಹಿಳಾ ಸಂವೇದನೆಯನ್ನು ಬಹುವಾಗಿ ಮಥನಕ್ಕೆ ದೂಡಿದ ಪಾತ್ರಗಳು.

ಪ್ರತಿ ಮಾದರಿಗಳ ನಿರ್ಮಾಣದ ಹಂತದಲ್ಲಿ ಪರಂಪರಾಗತವಾದ ಶ್ರೇಷ್ಠ ಮಾದರಿಗಳನ್ನು ನಿರಾಕರಿಸಿ ತನ್ನನ್ನು ತಾನು ಅಲಕ್ಷಿತ ಸಮುದಾಯಗಳೊಂದಿಗೆ ಗುರುತಿಸಿಕೊಳ್ಳುತ್ತದೆ -

ಕೊಳೆತ ಗುಲಾಬಿಯಡಿಯಲ್ಲಿ
ಮುಚ್ಚಿಹೋದ ಸತ್ತಹುಳು
ಯಾವುದಕ್ಕೂ ಉರಿದು ಬೇಗನೇ
ದ್ರವಿಸಿಬಿಡುವ ಮೇಣಬತ್ತಿ.....
ಯಾರೂ ಸಹಜವಾಗಿ ನನ್ನ ತುಳಿಯಬಹುದು
ನಾನೊಂದು ಗುಬ್ಬಿ ಇಣಚಿ ಮೊಲ

(ಎಚ್.ಎಸ್. ಮುಕ್ತಾಯಕ್ಕ – ನಾನು ಮತ್ತು ಅವನು)

ಪ್ರತೀಕಗಳನ್ನು ನಿರ್ಮಿಸುವಾಗ ಸ್ವ-ಮಾದರಿಗಳಾಗುವ ಅವಶ್ಯಕತೆ ಮಹಿಳಾ ಬರವಣಿಗೆಗಿತ್ತು. ಇದು ಆತ್ಮಗೌರವವನ್ನು ದಕ್ಕಿಸಿಕೊಳ್ಳುವ ಮಾರ್ಗವಾಗಿತ್ತು. ಪರಂಪರಾಗತ ಮೌಲ್ಯಗಳಿಂದ ಬಿಡುಗಡೆ ಪಡೆಯುವುದೆಂದರೆ ಅದನ್ನು ತುಚ್ಛೀಕರಿಸಿ ನಿರ್ಲಕ್ಷಿಸುವುದು. ಈ ಕಾರಣಕ್ಕಾಗಿ ಮಹಿಳೆ ತನ್ನನ್ನು ಸುತ್ತಿರುವ ಸಂಬಂಧಗಳನ್ನು ಪುನರ್ ಶೋಧಕ್ಕೆ ಒಡ್ಡಿಕೊಳ್ಳುತ್ತಾಳೆ. ಸ್ಥಾಪಿತ ದಾಂಪತ್ಯ ವ್ಯವಸ್ಥೆ ಆರಾಧನೆಯ ಮನೋಭಾವ ಮತ್ತು ಕೀಳರಿಮೆಯನ್ನು ಒಳಗೊಂಡಿದ್ದು ವಿಷಮ ಸ್ಥಿತಿಗೆ ದೂಡುತ್ತದೆ. ಪ್ರೀತಿ ಕೇವಲ ದೈಹಿಕ ಆಕರ್ಷಣೆಯದು ಮಾತ್ರವಾಗಿರದೆ ವ್ಯಕ್ತಿತ್ವ ಸಂಬಂಧಿಯೂ ಆಗಿರಬೇಕೆಂಬ ಕಳಕಳಿ ಕಂಡುಬಂತು.

ಈ ಪರಿಕಲ್ಪನೆ ಪ್ರೀತಿಯ ಅರ್ಥಸಾಧ್ಯತೆಯನ್ನೇ ವಿಸ್ತರಿಸುವಂಥದ್ದು. ಬದುಕಿನ ಎಲ್ಲ ನೆಲೆಯನ್ನೂ ಸುಮ್ಮನೆ ಎದುರಿಸಿಬಿಡುವ ಎದೆಗಾರಿಕೆ ವ್ಯಕ್ತವಾಯಿತು.

ಹೋಗಯ್ಯ ಹೋಗು ಎಲ್ಲಿಗೆ ಹೋಗುತ್ತೀ?
ನನಗೆ ಗೊತ್ತಿಲ್ಲವೇ ?
ನನ್ನದೆಗೆ ಬೇರಿಳಿದ ಕಾಲು ನಿನ್ನದು

(ಸ. ಉಷಾ - ತೊಗಲುಗೊಂಬೆಯ ಆತ್ಮಕತೆ)

ಪ್ರೀತಿಯಂತಹ ಭಾವದೀಪಕತೆಯಲ್ಲಿಯೂ ತನ್ನತನವನ್ನು ಜೋಪಾನವಾಗಿಸಿಕೊಳ್ಳುವ ಪ್ರಜ್ಞೆ ಬೆಳೆಯಿತು.

ಸೂರ್ಯ ಮುಳಿಗದಸಂದರೆ
ಪೃಥ್ವಿಯೇಕೆ ಕತ್ತಲಾಗಬೇಕು?
ಅರ್ಥವಿಲ್ಲ.

(ವೈದೇಹಿ – ಒಂದು ಬಿಂದಿಗೆ )

ಇಂತಹ ಜೀವಪರತೆಯತ್ತ ತುಡಿವ 'ಆರ್ದ್ರ ಗರ್ವದ ಹುಡುಗಿ ನಮ್ಮ ಗೌರಿ' ಮಹಿಳಾ ಕಾವ್ಯದ ಧೀಮಂತಿಕೆಯ ಸಂಕೇತವಾಗುತ್ತಾಳೆ. ಕೌಟುಂಬಿಕ ಸಾಮಾಜಿಕ ಸಾಂಸ್ಕೃತಿಕ ತಿರಸ್ಕಾರವನ್ನು ಸಹಜ ಅಭಿಮಾನ ಮತ್ತು ಹೆಮ್ಮೆಯಿಂದ ಎದುರಿಸಿ ನಿಲ್ಲುವ ಅಗತ್ಯವನ್ನು ಮಹಿಳಾ ಕಾವ್ಯ ಪ್ರತಿಪಾದಿಸಿತು. ಇದು ಸ್ತ್ರೀಲೋಕದ ಸಶಕ್ತತೆಯೂ ಆಗಿತ್ತು. ಮಹಿಳೆಯ ವೈಯಕ್ತಿಕ ಮತ್ತು ಸಾಮುದಾಯಿಕ ಅಗತ್ಯಗಳು ಪರಸ್ಪರ ಅಭಿನ್ನವಾದ್ದರಿಂದ ಅಂತಹ ಸಂಕೀರ್ಣತೆಯನ್ನೂ ಮಹಿಳಾ ಕಾವ್ಯ ರೂಪಿಸಿಕೊಂಡಿತು.

ಪ್ರತೀಕಗಳ ನಿರ್ಮಿತಿಯಲ್ಲಿ ಪರಂಪರೆಯ ಎಲ್ಲ ಮಹಾವ್ಯಕ್ತಿಗಳನ್ನು ಮುಖಾಮುಖಿಗೊಳಿಸಿಕೊಳ್ಳುವ ಘನತೆಯನ್ನೂ ಮಹಿಳಾ ಕಾವ್ಯ

ತೋರಿದೆ. ಉದಾಹರಣೆಗಾಗಿ 'ಮನಸಿನಾಳದಿಂದ ಎದ್ದು ಬಂದ ಬುದ್ಧ ಈಗ ಮತ್ತೆ ಬಂದಿದ್ದಾನೆ' ಎಂಬ ರೂಪಾಹಾಸನ ಅವರ 'ಮುಖಾಮುಖಿ' ಕವಿತೆಯನ್ನು ಗಮನಿಸಬಹುದು. ಬುದ್ಧನೊಂದಿಗೆ ಹೆಜ್ಜೆ ಹಾಕಲಾಗದೆ ಅಡಿಗೆಮನೆಯಲ್ಲೇ ನಿಂತ ಹುಡುಗಿಯನ್ನು ಕಾಣುತ್ತ ಕಾಣುತ್ತ ಬುದ್ಧನೇ ನಗು ಮರೆತು ಗಂಭೀರನಾಗುವ ಚಿತ್ರಣವಿದೆ. ಸ್ತ್ರೀತ್ವದ ಅಸ್ತಿತ್ವ ನಿರ್ಮಿತಿಯ ನೆಲೆಯಿಂದ ತುಂಬ ಮುಖ್ಯವಾದ ನಡೆಯಿದು.

**೪. ಪರ್ಯಾಯ ನೆಲೆಯ ಹುಡುಕಾಟ**

ಮಹಿಳೆಯ ಬದುಕಿನ ವಿಧಾನದಲ್ಲಿ ಮೂಲಭೂತ ಬದಲಾವಣೆಗಳಾಗದೆ, ಸಾಹಿತ್ಯದ ನಿಲುವುಗಳಲ್ಲಿ ಬದಲಾವಣೆಗಳಾಗುವುದು ಸಾಧ್ಯವಿರಲಿಲ್ಲ. ಆದರೆ ಶೋಷಿತ ಸ್ಥಿತಿಯ ತಿಳಿವನ್ನು ಪರ್ಯಾಯ ಗೊಳಿಸಿಕೊಳ್ಳಲೇಬೇಕಿತ್ತು. ದಮನಿತ ಹಂತದ ತಾತ್ಸಾರ ಹಾಗೂ ಭಿನ್ನ ಸಾಧ್ಯತೆಯ ಹುಡುಕಾಟವನ್ನು ಮಹಿಳಾ ಸಂವೇದನೆ ಮುಖಾಮುಖಿ ಗೊಳಿಸಿಕೊಂಡಿದೆ. ಸಾಮಾಜಿಕ ಸಂಗತಿಗಳನ್ನು ಒತ್ತಾಯಪೂರ್ವಕವಾಗಿ ವಿಕಾಸಕ್ಕೆ ಒಗ್ಗಿಸಿಕೊಳ್ಳುವ ಜರೂರು ಎದುರಾಯಿತು.

ಬೆಳಗಿನಿಂದ ರಾತ್ರಿಯವರೆಗಿನ ತುಂಬಾ ಕೆಲಸದ ಬಗ್ಗೆ
ರಾತ್ರಿಯ ಆಕ್ರಮಣದ ಬಗ್ಗೆ ಮನಸ್ಸಿನ ಮೇಲೆ
ಮುಸುಕೆಳೆದು ಬುದ್ಧಿಗೆ ಬಿರಡೆ ಹಾಕುವ ಬಗ್ಗೆ
ಗುರುತಿಸಿಲ್ಲದ ಬಗ್ಗೆ ಒಟ್ಟಿನಲ್ಲಿ ತುಳಿತಕ್ಕೊಳಗಾದ ಬಗ್ಗೆ
ಬಹಳಷ್ಟು ಹೇಳಿಯಾಗಿದೆ ಇನ್ನೂ ಗೊಣಗುವುದರಲ್ಲಿ ಅರ್ಥವಿಲ್ಲ.

*(ಪ್ರತಿಭಾ ನಂದಕುಮಾರ್ – 'ಆಹಾ! ಪುರುಷಾಕಾರಂ')*

ಮಹಿಳಾ ಚರಿತ್ರೆಯ ನಿನ್ನೆ-ಇಂದುಗಳನ್ನು ಕಟ್ಟಿಕೊಟ್ಟ ಈ ಇಂಥ ಬರವಣಿಗೆಗಳು ಪರ್ಯಾಯ ಸಾಧ್ಯತೆಗಳ ಹಕ್ಕೊತ್ತಾಯವನ್ನು ಮಂಡಿಸಿದವು. ಪರ್ಯಾಯಗಳು ನಿರ್ಮಾಣಗೊಳ್ಳುವುದಿಲ್ಲ, ನಿರ್ಮಿಸಿ ಕೊಳ್ಳಬೇಕಾಗುತ್ತದೆ ಎಂಬ ಅರಿವು ಬೆಳೆಯಿತು. ಪರ್ಯಾಯಗಳ ಹುಡುಕಾಟವನ್ನು ದಮನಿತ ಸಂವೇದನೆ ನಡೆಸಬೇಕೆ ವಿನಃ ದಮನಕಾರಿ ಸ್ಥಿತಿಯಲ್ಲ. ಆದ್ದರಿಂದ ಮಹಿಳಾ ಕಾವ್ಯ ಈ ಸವಾಲನ್ನು ಉತ್ತರಿಸಿ ಕೊಳ್ಳುವ ಹಂತದಲ್ಲಿ ಹಲವು ಹಾದಿಗಳ ಅಗ್ನಿದಿವ್ಯವನ್ನು ಹಾದು ಬಂದಿದೆ. ದೈಹಿಕ-ಮಾನಸಿಕ ಅತ್ಯಾಚಾರ-ಅಸಡ್ಡೆಗಳನ್ನು ಉಪೇಕ್ಷಿಸು ವುದು; ಜೀವವಿರೋಧಿ ಧೋರಣೆಗಳ ಹೇರಿಕೆಯನ್ನು ಉದಾಸ ಗೊಳಿಸುವುದು; ತನ್ನನ್ನು ತಾನು ಉದಾತ್ತಗೊಳಿಸಿಕೊಳ್ಳುವುದು; ಮುಂದಿನ ತಲೆಮಾರಿನಲ್ಲಿ ಈ ಪ್ರಜ್ಞೆಯನ್ನು ತುಂಬುವುದು; ಪರಂಪರೆಯನ್ನು ಶೋಧಿಸಿಕೊಳ್ಳುವುದು.... ಹೀಗೆ.

ಇಂತಹ ಪರ್ಯಾಯ ನೆಲೆಯ ಹುಡುಕಾಟ ಮಹಿಳಾ ಸಂವೇದನೆಯ ಜೀವನ ಗ್ರಹಿಕೆ ಮತ್ತು ಅಭಿವ್ಯಕ್ತಿ ಸಾಧ್ಯತೆಗಳೆರಡಕ್ಕೂ ಸಂಬಂಧಿಸಿದ್ದಾಗಿತ್ತು. ಪುರುಷೀಕೃತ ಭಾಷೆ ಹಾಗೂ ಪ್ರಧಾನ ಸಾಹಿತ್ಯದ ವಿನ್ಯಾಸದಲ್ಲಿ ತನ್ನ ಅನುಭವವನ್ನು ಅಭಿವ್ಯಕ್ತಿಸುವ ಸಮಸ್ಯೆ ಎದುರಾಗಿತ್ತು. ಭಾಷಾನೀತಿಯು ಲಿಂಗನೀತಿಯನ್ನನುಸರಿಸಿಯೇ ಜನ್ಮತಾಳುವುದರಿಂದ ಪುರುಷ ಹಿತಾಸಕ್ತ ಭಾಷೆಯಲ್ಲಿ ಬರೆಯಲಾಗದ ತಳಮಳ, ಸ್ವಭಾಷಾ ಸಾಧ್ಯತೆಯನ್ನು ರೂಪಿಸಿಕೊಳ್ಳಲಾಗದ ಅಸಹಾಯಕತೆ, ಸ್ಥಾಪಿತ ಭಾಷೆಯಲ್ಲಿ ಸಂಹವನಿಸಲಾಗದ ವೇದನೆಯನ್ನು ಮಹಿಳಾ ಸಂವೇದನೆ ಎದುರಿಸಿದೆ.

ಇರದ ಅರ್ಥಕ್ಕಾಗಿ ಇರುವ ಶಬ್ದದ ತವಕ
ಕಂಗಳಲಿ ಕನಸು ಉರಿಬೂದಿ ಈ ತನಕ

*(ಹೇಮಾ ಪಟ್ಟಣಶೆಟ್ಟಿ -'ವಿರಹೋತ್ಸವ')*

ನನ್ನ ತಟ್ಟಿದ್ದು ನನ್ನ ಸುತ್ತಿದ್ದು
ನನ್ನ ಚುಚ್ಚಿದ್ದು ಬೇರೆಯೇ
ಬೇರೆಯೇ ಎಂದು
ಇವರು ತಿಳಿಯುವುದು ಹೇಗೆ ?

*(ಹೇಮಾ ಪಟ್ಟಣಶೆಟ್ಟಿ -'ವಿರಹೋತ್ಸವ')*

ಹೆಣ್ಣಿನ ಭಾವನೆಗಳ ಸಂವಹನಕ್ಕೆ ಭಾಷೆ ತೊಡಕಾಗುತ್ತದೆ ಎಂಬ ಕಳವಳವಿದು. ಭಿನ್ನ ಸಂವೇದನಾ ವಲಯವನ್ನು ಸಾಮಾನ್ಯ ಮತ್ತು ಸಾರ್ವತ್ರಿಕ ಭಾಷೆಯಲ್ಲಿ ಹಿಡಿದಿಡುವ ಕಸುವು ಮತ್ತು ಕಸರತ್ತನ್ನು ಗಮನಿಸಬಹುದು. ಬಹುತೇಕ ಮಹಿಳಾ ಸಂವೇದನೆ ಈ ಆತಂಕವನ್ನು ಎದುರಿಸಿದೆ. ಹೆಣ್ಣು ಗಂಡಿನ ಅನುಭವ ಲೋಕಗಳು ಬೇರೆಬೇರೆಯಾದ ವ್ಯವಸ್ಥೆಯಲ್ಲಿ ಸಂವಹನದ ಸಮಾನ ಸಾಧ್ಯತೆ ಕಠಿಣವಾದದ್ದು. ಪ್ರಾಮಾಣಿಕ ಅಭಿವ್ಯಕ್ತಿಗೆ ಪೂರಕವಲ್ಲದ ಒತ್ತಡಗಳಲ್ಲಿ ಮಹಿಳಾ ಕಾವ್ಯ ಭಾಷೆಯು ರೂಪಕ, ಪ್ರತಿಮೆ, ಸಾಂಕೇತಿಕತೆಯನ್ನು ಅವಲಂಬಿಸಿದೆ. ಭಾಷೆಯಲ್ಲಿ ಪಾರಿಭಾಷಿಕವಲ್ಲದ ನುಡಿಗಟ್ಟುಗಳು, ಸೂಕ್ಷ್ಮಾತಿಸೂಕ್ಷ್ಮ ಕಂಪನಗಳ ಬೆಡಗು ನಿರ್ಮಾಣಗೊಂಡಿತು.

ಮಹಿಳೆಯ ಅನುಭವ ಮತ್ತು ಅಭಿವ್ಯಕ್ತಿಯನ್ನು ಅಲಕ್ಷಿಸುವ ಸಾಂಸ್ಕೃತಿಕ ರಾಜಕಾರಣವನ್ನು ಅರ್ಥೈಸಿಕೊಂಡು, ತನ್ನ ಜಗತ್ತನ್ನು ಭಾಷೆಯಲ್ಲಿ ಪುನರ್‌ರೂಪಿಸುವ ಪ್ರಯತ್ನ ನಡೆಯಿತು. ತನ್ನ ಅನುಭವದ ಸಾಧ್ಯತೆ ಮತ್ತು ಮಿತಿಗಳೆರಡನ್ನೂ ಸ್ವಾಭಿಮಾನದಿಂದ ದಾಖಲಿಸುವ ಮೂಲಕ ಗಂಡಿನ ಅನುಭವ ಜಗತ್ತೇ ಶ್ರೇಷ್ಠ ಎಂಬ ಭ್ರಮೆಯನ್ನು ನಿರಸನಗೊಳಿಸಲಾಯಿತು. ಇದರಿಂದ ಭಾಷೆಯ ಏಮ್ಮುಖ ಚಲನೆಗೆ ತಡೆಯಾಯಿತು.

ನನಗೆ ಕಾವ್ಯ ಗೊತ್ತಿಲ್ಲ, ತಿಳಿಸಾರು ಗೊತ್ತು
ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೇ ಹೇಳಿ
ಗೊತ್ತೇ ನಿಮಗೆ ತಿಳಿಸಾರು ?

*(ವೈದೇಹಿ – 'ಬಿಂದುಬಿಂದಿಗೆ')*

ಈ ಇತ್ಯಾತ್ಮಕ ಧೋರಣೆ, ಪುರುಷ ಗೃಹೀತಗಳೊಳಗಿನ ಸಾಹಿತ್ಯ ಪರಂಪರೆಯನ್ನು ತಡೆಯಲು ಸಾಧ್ಯವಾಯಿತು. ಕಾವ್ಯ ಮೀಮಾಂಸೆಯ ಸ್ವರೂಪದೊಳಗಿನ ಇದೇ ಅಸಹಜತೆಯನ್ನು ಸ್ಪಷ್ಟವಾಗಿಯೇ ಅಲ್ಲಗಳೆಯುವ ಮೂಲಕ ಹೊಸ ಪರಿಕಲ್ಪನೆಗಳನ್ನು ಬೆಳೆಸಲಾಯಿತು. ಕಾವ್ಯ ಮೀಮಾಂಸೆ ಮತ್ತು ವಿಮರ್ಶೆಯ ನಿಲುವುಗಳನ್ನು ಪ್ರಶ್ನಿಸುವ, ನಿರಾಕರಿಸುವ ಪರಿಕ್ರಮ ಬೆಳೆಯಿತು. ಶ್ರೇಷ್ಠ ಕನಿಷ್ಠ ಎಂಬ ವರ್ಗೀಕರಣವು ವಸ್ತುಸಂಬಂಧಿಯಾದುದಲ್ಲ, ಗ್ರಹಿಕೆಗೆ ಸಂಬಂಧಿಸಿದ್ದು. ಈ ಗ್ರಹಿಕೆ ಸಾಮಾಜಿಕ-ಸಾಂಸ್ಕೃತಿಕ ನಿಲುವುಗಳಿಂದ ನಿರ್ದೇಶಿತ ವಾಗಿರುತ್ತದೆ. ಹಾಗಾಗಿ ನಮ್ಮ ಗ್ರಹೀತಗಳನ್ನೇ ಪರಾಮರ್ಶಿಸಿಕೊಳ್ಳುವ ತುರ್ತು ಇದೆ. ಪರಂಪರೆಯನ್ನು ಮುಖಾಮುಖಿಗೊಳಿಸಿಕೊಳ್ಳುವುದು, ಪರಂಪರೆಯ ಸ್ವೀಕರಣಕ್ಕಾಗಿ ಮಾತ್ರ ಈ ಶೋಧ ಅಂತಲ್ಲ, ವರ್ತಮಾನವನ್ನು ಶೋಧಿಸಿಕೊಳ್ಳಲೂ ಇದು ಅಗತ್ಯ. ಆಗ ಹೆಗಲಲ್ಲಿ ಸಾವಿರ ಸವಾಲುಗಳನ್ನು ಹೊತ್ತು ನಡೆಯುವುದು ಸಾಧ್ಯ. ಈ ನಡೆಗೆ ಅಪಾರ ಜೀವನಪ್ರೀತಿ ಮತ್ತು ಶ್ರಮಗಳ ಅಗತ್ಯವಿದೆ. ಎಂತಹ ವಿರೋಧಿ ಸನ್ನಿವೇಶದಲ್ಲಿಯೂ ಇತ್ಯಾತ್ಮಕ ಧೋರಣೆಯಿಂದ ನಡೆಯಬೇಕಿದೆ.

ಯಾವ ಕ್ಷಣದೆದೆಯಲ್ಲಿ
ಎಂಥ ಜೇನಿದೆಯೋ
ತೆರೆದಿಡು ಹೃದಯದ ಕದ
ಯಾವ ಪದ ಕಾಯ್ದಿದೆಯೋ

*(ಮಾಲತಿ ಪಟ್ಟಣಶೆಟ್ಟಿ -'ಹೂ ದಂಡಿ')*

ಬದುಕನ್ನು ಸಂಭಾಳಿಸಿಕೊಳ್ಳುವ ಇಂತಹ ಒಲವೇ ಪರ್ಯಾಯ ಜೀವಸಂಸ್ಕೃತಿಯಾಗಿ ಬೆಳೆಯುತ್ತದೆ.

ನಾನು ಹೆಣ್ಣಷ್ಟೇ ಅಲ್ಲ, ಮನುಷ್ಯಳು - ಎಂಬ ಪ್ರಜ್ಞೆಯಿಂದ ಆರಂಭಗೊಂಡ ಆಧುನಿಕ ಮಹಿಳಾ ಕಾವ್ಯ ಎರಡು-ಮೂರು ದಶಕಗಳಲ್ಲಿ ತಲುಪಿದ ನೆಲೆ ಬೆರಗುಗೊಳಿಸುವಂಥದ್ದು. ಹೆಣ್ಣುತನವನ್ನೇ ಸಾಕ್ಷೀಕರಿಸಿ ಕೊಂಡು ಅನುಭೂತಿಯ ಎತ್ತರವನ್ನು ಏರುವ ಧನ್ಯತೆಯದು. 'ಎನ್ನ ದೇಹವೇ ನೀನಾದ ಮೇಲೆ ಇನ್ನಾರ ಪೂಜಿಸುವೆನಯ್ಯ' ಎಂಬ ಅಕ್ಕನ ನಿಲುವಿನದು. ಹೆಣ್ಣುತನದ ಕುರಿತ ಪುರುಷ ಮಿಥ್‌ಗಳನ್ನು ಒಡೆದು ಪರ್ಯಾಯವನ್ನು ರೂಪಿಸಿಕೊಳ್ಳುವಾಗ ಹೆಣ್ಣಿನ ಸಹಜತೆಯನ್ನೇ ಮಾದರಿಯಾಗಿಸಿಕೊಳ್ಳಲಾಯ್ತು.

ದೇವರೇ,
ನಾವು ನಿನ್ನನ್ನು ಅನುವಾದಿಸುತ್ತಿದ್ದೇವೆ
ಕ್ಷಣಕ್ಷಣವೂ ನೀನು ಅನುವಾದಗೊಳ್ಳುತ್ತೀಯ
ಭೂಮಂಡಲದ ಮೇಲಿರುವ ಅಷ್ಟೂ ಭಾಷೆಗಳಲ್ಲಿ
ಏಕಕಾಲಕ್ಕೆ ಎಲ್ಲೆಡೆಯಲ್ಲಿ
ಎಲ್ಲ ತಾಯಂದಿರ ಪ್ರಕಟಿತ ಸಾಹಿತ್ಯಲ್ಲಿ
*(ಲಲಿತಾ ಸಿದ್ದಬಸಯ್ಯ – 'ಕಬ್ಬೆನೆಲ')*

ಇದು ತಾಯ್ತನವನ್ನು ವೈಭವೀಕರಿಸುವ, ದೈವತ್ವಕ್ಕೇರಿಸುವ ಮುಗ್ಧ ನೆಲೆಯಷ್ಟೇ ಆಗಿರದೆ, ಹೆಣ್ಣುತನವನ್ನು ಘನತೆಯಿಂದ ಕಾಣುವ ವಿವೇಕವೂ ಆಗಿದೆ. 'ಹೊಸ ಪದ್ಯ' ಎಂಬ ಲಲಿತಾ ಸಿದ್ಧಬಸಯ್ಯನವರ ಕವಿತೆ ಗಮನಾರ್ಹವಾಗಿದೆ. 'ಈ ರಾಜಕುಮಾರಿ ಒಂದೂರ ದೊರೆಗೊಬ್ಬಳೇ ಮಗಳು. ಆದರೆ ನಗಿಸುವವ ಬರಲೆಂದು ಎದುರು ನೋಡುವವಳಲ್ಲ. ಏಳುಪ್ಪರಿಗೆಯ ಮೇಲೆ ಕೂತು ಗಿಣಿ ಮಾಡಿ ಕುಣಿಸುವವನ ಕಾಯುವವಳಲ್ಲ. ಮರ್ಯಾದೆ ಮೈ ತುಂಬ ಹೊದ್ದರೂ ಎಲ್ಲ ಆಕರ್ಷಣೆ ದಾಟಿ ವ್ಯೋಮ ವಿಸ್ತಾರಕ್ಕೆ ಜಿಗಿಯಬಲ್ಲಳು'.

ನಮ್ಮ ಮನಮೃತ್ತಿಕೆಯಿಂದ ಸೃಷ್ಟಿಗೊಂಡಿರುವ ಮೃಣ್ಮಯಿ
ನಮ್ಮೆಷ್ಟೋ ದಿನಗಳ ಹಗಲಹಂಬಲ ಇರುಳ ಕನವರಿಕೆಯ ಹಣ್ಣು
ಯಾವ ದೇವಿಯ ವರಪ್ರಸಾದವೂ ಅಲ್ಲ ಸಹಜಕೃಷಿಯ ಪೈರು
ಇವಳು ಗೆಲ್ಲುತ್ತಾಳೆ ಇವಳು ಗೆಲ್ಲುತ್ತಾಳೆ ಗೆಲ್ಲುತ್ತಾಳಿವಳು
*(ಲಲಿತಾ ಸಿದ್ದಬಸಯ್ಯ – 'ಹೊಸಪದ್ಯ'-ಮಾನಸ)*

ಇಂತಹ ಸ್ಪಷ್ಟ ಸ್ತ್ರೀಪರ ಆಶಯಗಳು ಮಹಿಳಾ ಕಾವ್ಯದ ಆತ್ಮಗೀತಿಕೆಗಳಾಗಿವೆ. 'ಗೆಲ್ಲುವ ಇವಳು' ಮನಮೃತ್ತಿಕೆಯಲ್ಲಿಯೇ ರೂಪುಗೊಳ್ಳುತ್ತಿರುವವಳು. ಈ ರೂಪಧಾರಣ ಮುಂದಿನ ಜೀವನಧಾರಣಕ್ಕೆ ಬೀಜವಾಗಬಹುದು.

ಹೀಗೆ ಕನ್ನಡ ಮಹಿಳಾ ಕಾವ್ಯ ಮಹಿಳಾ ಬದುಕಿನೊಂದಿಗೆ ನಿರಂತರವಾಗಿ ಅನುಸಂಧಾನಗೊಳ್ಳುತ್ತ ಹೊಸ ಮುನ್ನೋಟಗಳನ್ನು ಪಡೆದುಕೊಂಡಿದೆ. ಹೆಣ್ಣಿನ ಬದುಕಿನ ಸಂಭ್ರಮ-ವಿಷಾದಗಳಾಚೆಗೆ ಇಡಿಯ ಬದುಕಿಗೆ ತೆರೆದುಕೊಂಡ ಪ್ರಮಾಣ ಕಡಿಮೆ. ನಡೆದ ಪ್ರಯತ್ನಗಳು ಕೂಡ ಮಹಿಳಾ ಸಂವೇದನೆಯ ಶ್ರೇಷ್ಠ ಅಭಿವ್ಯಕ್ತಿ ಮಾದರಿಗಳಾಗಿಲ್ಲ. ಇಪ್ಪತ್ತನೆಯ ಶತಮಾನದ ಕೊನೆ ಹಲವು ವಿಪ್ಲವಗಳಿಗೆ ಕಾರಣವಾಗಿದೆ. ಇಪ್ಪತ್ತನೆಯ ಶತಮಾನದ ಆರಂಭದ ದಶಕಗಳಲ್ಲಿ ಕಂಡುಬಂದ ಆಧುನಿಕ ಚಿಂತನೆಗಳು ಮತ್ತು ಆ ಕಾರಣಕ್ಕಾಗಿ ನಡೆದ ಸ್ವಾತಂತ್ರ್ಯ-ಸಮಾನತೆಯ ತಾತ್ವಿಕ ಜಿಜ್ಞಾಸೆಗಳು ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಮರೆಯಾಗತೊಡಗಿದವು. ಆಧುನಿಕತೆಯು ಮಹಿಳೆಯನ್ನು ಸಾಮಾಜಿಕ ಬದುಕಿನೊಂದಿಗೆ ಜೋಡಿಸುವ ಪ್ರಯತ್ನ ಮಾಡಿದರೆ, ಜಾಗತೀಕರಣ ಮಹಿಳೆಯ ಜ್ಞಾನ ಮತ್ತು ದುಡಿಮೆಯನ್ನು ಕೇಂದ್ರೀಕೃತ ಬಂಡವಾಳವನ್ನಾಗಿ ಉಪಯೋಗಿಸಿ ಕೊಳ್ಳತೊಡಗಿದೆ. ದೇಹದ ಐಡೆಂಟಿಟಿಯಿಂದ ಆಚೆಗೆ ತರಲಾಗಿದ್ದ 'ವ್ಯಕ್ತಿತ್ವ' ಕಲ್ಪನೆ ಮತ್ತು ದೇಹಬದ್ಧತೆಯೆಡೆಗೆ ಚಲಿಸತೊಡಗಿತು. ಬಂಡವಾಳಶಾಹಿ ವ್ಯವಸ್ಥೆಯ ಮಾರುಕಟ್ಟೆ ನೀತಿಯಿಂದಾಗಿ ಮಹಿಳೆ ಗ್ರಾಹಕ ಜಗತ್ತಿನ ಸರಕಾದಳು. ಆಧುನಿಕ ವಿಜ್ಞಾನ, ತಂತ್ರಜ್ಞಾನದ ಸೀಳು ಅಧ್ಯಯನ ಕ್ರಮದ ವ್ಯಂಗ್ಯವೆಂಬಂತೆ ಹೆಣ್ಣಿನ ದೇಹ, ಮಾತು, ಭಾವನೆ, ಪ್ರತಿಭೆ, ಕ್ರಿಯಾಶೀಲತೆಗಳೆಲ್ಲವನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಹರಾಜಿಗೆ ಹಾಕುವಂತಹ ಉದ್ಯಮೀಕರಣ ಎದುರಾಗಿದೆ. ಖಾಸಗೀಕರಣ ಪ್ರಕ್ರಿಯೆ ಸಾಮಾಜಿಕ ನ್ಯಾಯಕ್ಕೆ ವಿರುದ್ಧವಾದುದರಿಂದ ಸಮಾನತೆಯ ಪರಿಕಲ್ಪನೆಗಳು ನಸಿ, ಪೂರ್ವ ಸಿದ್ಧತೆಗಳು ಪೂರ್ತಿಯಾಗಿಲ್ಲದ ಮಹಿಳಾ ಸಂವೇದನೆ ಮುಕ್ತ ಸ್ಪರ್ಧೆಯಲ್ಲಿ ಪಾಲ್ಗೊಳ್ಳಲಾಗದೆ ಅಸಹನೀಯ ಸ್ಥಿತಿಯನ್ನು ತಲುಪುತ್ತಿದೆ. ಈ ಮುಕ್ತ ಸ್ಪರ್ಧೆ ಕೂಡ ಪುರುಷಶಾಹಿ ಬಂಡವಾಳ ವ್ಯವಸ್ಥೆಯ ಚೌಕಟ್ಟೇ ಆಗಿದೆ. ಹೆಣ್ಣಿನ ಶ್ರಮ ಮತ್ತು ಕರ್ತೃತ್ವ ಶಕ್ತಿಗಳು ದಬ್ಬಾಳಿಕೆಗೆ ಒಳಗಾಗುತ್ತಿವೆ. ಪರಂಪರಾಗತ ಶೋಷಣೆಯ ಸ್ಥಿತಿಗಳು ರೂಪಾಂತರಗೊಂಡು ಆಕ್ರಮಿಸುತ್ತಿವೆ. ಆರ್ಥಿಕ ಒಡೆತನದಲ್ಲಿ ನೇರ ಪಾಲುದಾರಳಲ್ಲದ ಮಹಿಳೆ ಆರ್ಥಿಕ ದಬ್ಬಾಳಿಕೆಗೆ ದೊಡ್ಡ ಪ್ರಮಾಣದಲ್ಲಿ ಒಳಗಾಗುತ್ತಿದ್ದಾಳೆ. ಹಣ ಜೀವನ ವಿಧಾನವನ್ನು ರೂಪಿಸುವುದರಿಂದ ಮಹಿಳೆ ವಸ್ತುಮೌಲ್ಯವನ್ನು ತಲುಪಿದ್ದಾಳೆ. ಪರಂಪರಾಗತ ಮೌಲ್ಯಗಳು ಮಹಿಳಾ ವಿರೋಧಿಯಾಗಿದ್ದಂತೆ, ಜಾಗತೀಕರಣ ಮೌಲ್ಯಗಳು ಕೂಡ ಮಹಿಳಾ ವಿರೋಧಿಯೇ ಆಗಿರುವುದರಿಂದ ಇಂದಿನ ಮಹಿಳೆಯ ಬದುಕು ವಿಚಿತ್ರ ತಳಮಳಗಳಿಗೆ ಒಳಗಾಗಿದೆ. ಆದರೆ ಈ ತಲ್ಲಣಗಳು ಮಹಿಳಾ ಕಾವ್ಯವನ್ನು ಗಾಢವಾಗಿ ಪ್ರಭಾವಿಸಿದಂತೆ ಕಾಣುವುದಿಲ್ಲ. ಜಾಗತೀಕರಣದ ನೀತಿಯಿಂದಾಗಿ ಕಳೆದ ಎರಡು ದಶಕಗಳಲ್ಲಿ ಬೀದಿಗೆ ಬಿದ್ದ ಕಾರ್ಮಿಕರು, ಕೃಷಿ ಕಾರ್ಮಿಕರು, ರೈತರ ಆತ್ಮಹತ್ಯೆಗಳು, ಉದ್ಯೋಗಿಗಳ ಆತ್ಮಹತ್ಯೆಗಳು, ವಿದ್ಯಾರ್ಥಿನಿಯರ-ಮಹಿಳಾ ಉದ್ಯೋಗಿಗಳ ಆತ್ಮಹತ್ಯೆಗಳು.... ಈ ಯಾವುದೂ ಮಹಿಳಾ ಸಂವೇದನೆಯನ್ನು ಅಲ್ಲಾಡಿಸಲಿಲ್ಲ. ಮಹಿಳೆಯ ಮೇಲೆ ನಡೆಯುತ್ತಿರುವ ಅತ್ಯಾಚಾರ, ಆಸಿಡ್ ದಾಳಿ, ಅಧಿಕಾರಶಾಹಿ ಅನ್ಯಾಯಗಳನ್ನು 'ಸಹಜ ಸ್ಥಿತಿ' ಎಂಬಂತೆ ಸ್ವೀಕರಿಸಲಾಗುತ್ತಿದೆ. ಅಥವಾ ಈ ಅನುಭವಗಳನ್ನು ಅಭಿವ್ಯಕ್ತಿಯ ಆಳಕ್ಕೆ ಇಳಿಸಿಕೊಳ್ಳುವಲ್ಲಿ ಮಹಿಳಾ ಸಂವೇದನೆ ಸೋಲುತ್ತಿದೆ.

ಬಂಡವಾಳಶಾಹಿಯ ಮಗ್ಗುಲಾಗಿ ಬೆಳೆದ ಕೋಮುವಾದ-ಮಹಿಳೆಯನ್ನು ಕೋಮಿನ ಆಸ್ತಿ ಮತ್ತು ಐಡೆಂಟಿಟಿ ಎಂದು ತಿಳಿಯುತ್ತದೆ. ಅವಳ ಸ್ವತಂತ್ರ ಅಸ್ತಿತ್ವವನ್ನೇ ನಿರಾಕರಿಸುವ ಮತೀಯ ಚಿಂತನೆಗಳು ಬಲಿಯುತ್ತಿವೆ. ಪ್ರಭುತ್ವ ಮತ್ತು ಮತೀಯವಾದಗಳು ಒಂದಾಗಿ ಜನಸಂವೇದನೆಯನ್ನು ಹತ್ತಿಕ್ಕುತ್ತಿವೆ. ದೇಶದ ಮೂಲೆಮೂಲೆಗಳಲ್ಲಿ ವಿಧ್ವಸಂಕ ಚಟುವಟಿಕೆಗಳು ಪ್ರಭುತ್ವದ ಆಡಳಿತದ ಭಾಗವೆಂಬಂತೆ ನಡೆಯುತ್ತಿವೆ. ಸೂರತ್ ಗಲಭೆ, ಗುಜರಾತ್ ಹತ್ಯಾಕಾಂಡ, ನಂದಿಗ್ರಾಮದ ಹಿಂಸಾಚಾರ, ನರ್ಮದಾ ಬಚಾವೋ ಆಂದೋಲನ - ಇಂತಹ ಹಲವಾರು ಸಂಗತಿಗಳು ಮಹಿಳಾ ಕಾವ್ಯದೊಳಗೆ ಸೇರುತ್ತಿಲ್ಲ. ಈ

ಎಲ್ಲ ಸಂಗತಿಗಳು ಕೌಟುಂಬಿಕ ರಚನೆಯನ್ನೂ ಪರಿಣಾಮಿಸುವುದರಿಂದ ಅಲ್ಲಿಯ ರಾಜಕೀಯದಿಂದ ಹೊರಬರುವ ಹೋರಾಟದಲ್ಲಿ ಮಹಿಳಾ ಸಂವೇದನೆ ದಣಿಯುತ್ತಿದೆಯೇ? ಅತ್ಯಂತ ವೇಗವಾಗಿ ನಡೆಯುತ್ತಿರುವ ಪಲ್ಲಟಗಳಿಗೆ ಪ್ರತಿಸ್ಪಂದಿಸುವುದು ಕಠಿಣವಾಗುತ್ತದೆಯೇ? ಪುರುಷ ಹಿತಾಸಕ್ತ ಬಂಡವಾಳಶಾಹಿಯ ಸಿದ್ಧ ಚೌಕಟ್ಟಿನೊಳಗೆ ಮಹಿಳಾ ಸಂವೇದನೆ ದಿಕ್ಕು ತಪ್ಪು ಮಹಿಳಾ ಪ್ರಜ್ಞೆ ವರ್ತಮಾನದ ಕೋಮುವಾದಿ ರಾಜಕಾರಣವನ್ನು ಅಧಿಕಾರಶಾಹಿ ದೌರ್ಬಲ್ಯ ಮತ್ತು ಭ್ರಷ್ಟತೆಯನ್ನು ವಿರೋಧಿಸುವ, ಕೊನೆಗೆ ತಾತ್ತ್ವಿಕ ಮಟ್ಟದಲ್ಲಾದರೂ ವಿರೋಧಿಸುವ ನೈತಿಕತೆಯನ್ನು ತೋರಬೇಕಿದೆ. ಎಲ್ಲ ಜನಪರ ಚಳವಳಿಗಳಂತೆ ಮಹಿಳಾ ಚಳವಳಿಗಳೂ ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಛಿದ್ರಗೊಂಡವು. ಈ ಛಿದ್ರತೆಗೆ ಮತೀಯವಾದ, ಜಾತಿ ರಾಜಕಾರಣ ಮತ್ತು ಕೊಳ್ಳುಬಾಕ ಸಂಸ್ಕೃತಿಗಳು ಕಾರಣಗಳಾಗಿದ್ದವು. ಮಹಿಳೆ ಬೇರೆಬೇರೆ ಜಾತಿ, ಧರ್ಮ ಮತ್ತು ರಾಜಕೀಯ ಬ್ಯಾನರ್‌ಗಳಡಿಯಲ್ಲಿ ಹಂಚಿಹೋಗಿರುವುದರಿಂದ ಇಡಿಯಾಗಿ ಮಹಿಳಾ ಸಮಸ್ಯೆ–ಸಂಗತಿಗಳ್ನು ಕಾಣುವುದು ಸಾಧ್ಯವಿಲ್ಲ. ಮಹಿಳೆಯ ಅಭಿವೃದ್ಧಿಯ ಹೆಸರಿನಲ್ಲಿ ನಡೆಸುವ ಕಾರ್ಯಕ್ರಮಗಳು ಅರ್ಥಹೀನ ಎನಿಸುತ್ತಿವೆ. ಎನ್.ಜಿ.ಓ.ಗಳಿಂದ ನಡೆಯುವ ಮಹಿಳಾ ಸಂಘಟನೆಗಳು ಯಾವ ವಿಧವಾದ 'ಮಹಿಳಾ ಸಬಲೀಕರಣ'ವನ್ನು ರೂಪಿಸಬಲ್ಲವು? ಸರ್ಕಾರೀ ಯೋಜನೆಗಳ ಅಂಗವಾಗಿ ನಡೆಯುವ ಕಾರ್ಯಚಟುವಟಿಕೆಗಳು ಮಹಿಳಾ ಬದುಕಿಗೆ ಪೂರಕವಾಗಿವೆಯೇ? ಸರ್ಕಾರೀ ಕಾರ್ಯಕ್ರಮಗಳು ಪಕ್ಷದ ಕಾರ್ಯಕ್ರಮಗಳಂತೆ ಅರ್ಥಪಡೆದುಕೊಳ್ಳುತ್ತಿವೆ. ಇನ್ನೊಂದೆಡೆ ಮತ-ಮಾನ್ಯಗಳು ಮಹಿಳಾ ಪರತೆಯ ಮುಖವಾಡದಲ್ಲಿ ಮತೀಯ ಭಾವನೆಗಳನ್ನು ಬೆಳೆಸುತ್ತಿವೆ. ಸಾಮಾಜಿಕ ಬದುಕು ಅಸ್ಪಷ್ಟಗೊಂಡ ಕಾಲವಿದು. ಶಾಂತಿ-ಸೌಹಾರ್ದತೆಯ ಸಮಾಜದಲ್ಲಿ ಹೆಚ್ಚು ಪ್ರಖರವಾಗಿ ಕಾಣಿಸಿಕೊಂಡ ಮಹಿಳಾಪರಚಿಂತನೆ ಮಹಿಳಾ ಕಾವ್ಯಕ್ಕೂ ಭೂಮಿಕೆಯನ್ನು ಸಿದ್ಧಪಡಿಸಿತ್ತು. ಆದರೆ ಇದೀಗ ಚಿಂತನೆ ಮತ್ತು ಕಾವ್ಯಗಳೆರಡೂ ಸಾಮಾಜಿಕ ಪ್ರಜ್ಞೆಯಿಂದ ದೂರವಾಗುತ್ತ ಮಸಿಕಟ್ಟಿದ ದೀಪದಂತೆ ಮಬ್ಬಾಗಿವೆ. ಮಣಿಪುರದ ಮಹಿಳೆಯರ Indian Army Rape us ಎಂಬ ಕೂಗೂ ಕೂಡ ಮಹಿಳಾ ಸಂವೇದನೆಯಲ್ಲಿ ಕಂಪನವನ್ನು ಹುಟ್ಟಿಸುತ್ತಿಲ್ಲ. ಮೇಧಾ ಪಾಟ್ಕರ್, ತಸ್ಲೀಮಾ ನಸ್ರೀನ್, ಸಾಲುಮರದ ತಿಮ್ಮಕ್ಕ ಯಾರೂ ಇಲ್ಲಿ ಹಾಜರಾಗುವುದಿಲ್ಲ. ಇತಿಹಾಸ-ಪುರಾಣಗಳ ಮಿಥ್‌ಗಳನ್ನು ಒಡೆಯುವ ಸುಂದರ ನಿರ್ಮಿತಿ ಕೂಡ ವರ್ತಮಾನದ ಜರೂರುಗಳ ಹಿನ್ನೆಲೆಯಲ್ಲಿ ಪಲಾಯನವಾದವಾಗಿ ಕಾಣುತ್ತದೆ. ನಿನ್ನೆಯಂತೆ ನಾಳೆಯೂ ಮುಖ್ಯವೇ ಅಲ್ಲವೇ? ಇಷ್ಟಕ್ಕೂ ಕಾವ್ಯ ಯಾರಿಗಾಗಿ ಮತ್ತು ಯಾತಕ್ಕಾಗಿ ಎಂಬ ಪ್ರಶ್ನೆ ಜೀವಂತವಾಗಿದೆ ಎಂದುಕೊಳ್ಳಬಹುದಲ್ಲವೇ?

ಇಂಥ ಸಾರ್ಥಕ ಪ್ರಯತ್ನಗಳೂ ಅಪರೂಪಕ್ಕೆ ನಡೆದಿವೆ. ಸವಿತಾ ನಾಗಭೂಷಣ ಅವರ 'ಮಹಮ್ಮದನಿಗೊಂದು ಪ್ರೇಮಪತ್ರ' ಎಂಬ ಕವಿತೆಯನ್ನು ಸಾಂಕೇತಿಕವಾಗಿ ಗಮನಿಸಿಕೊಳ್ಳಬಹುದು. ಬಾಲ್ಯದ ಗೆಳೆಯನಿಗೆ ಬರೆದ ಓಲೆ ಇನ್ನು ಇಂತಹ ಗೆಳೆತನವೂ ಸಾಧ್ಯವಿಲ್ಲದ ಸಾಮಾಜಿಕತೆಯನ್ನು ಲೇವಡಿ ಮಾಡುತ್ತದೆ. ಉಳಿದ ಸಾಹಿತ್ಯ ಪ್ರಕಾರಗಳಿಗೆ ಹೋಲಿಸಿದರೆ ಕಾವ್ಯ ವರ್ತಮಾನವನ್ನು ಎದುರಿಸಿದ್ದು ಕಡಿಮೆಯೇ.

ಬಂಡವಾಳಶಾಹಿ ಆರ್ಥಿಕ ಸಿದ್ಧಾಂತಗಳು ಹೆಣ್ಣಿನ ಚಹರೆಗಳನ್ನು ಬದಲಿಸಿವೆ. ಮೌಲ್ಯಗಳು ಉಪರಾಟೆಗೊಂಡಿವೆ. ಹೆಣ್ಣಿನ ಜೈವಿಕ-ಕೌಟುಂಬಿಕ-ಸಾಮಾಜಿಕ ಕ್ರಮದ ಉತ್ಪನ್ನಗಳಾದ ಮಾನವ ಸಂಪನ್ಮೂಲವನ್ನು ತಾತ್ಸಾರದಿಂದ ನೋಡುತ್ತಿದೆ. ಯುದ್ಧಮುಖಿಯಾದ ಈ ಕಾಲ ಮಹಿಳಾ ಸಂವೇದನೆಗೆ ಸೋಲಿನದ್ದು ಮತ್ತು ಸಂಕಟದ್ದು. ಆದರೆ ಇದನ್ನು ಹಿಡಿದಿಡುವಲ್ಲಿ ಮಹಿಳೆಯ ತೊಡಗಿಕೊಳ್ಳುವಿಕೆಯ ಕೊರತೆಯಿದೆ. ಈ ಕೊರತೆ ಬದುಕನ್ನು ಗ್ರಹಿಸುವ-ಸ್ವೀಕರಿಸುವ ವಿಧಾನದಲ್ಲಿದೆ. ಈ ವಿಧಾನ ಪುರುಷ ಮತ್ತು ಪ್ರಭುತ್ವ ಹಿತಾಸಕ್ತವಾಗಿದೆ. ಮಹಿಳಾ ಸಂವೇದನೆ ವರ್ತಮಾನವನ್ನು ಮುಖಾಮುಖಿಗೊಳಿಸಿಕೊಳ್ಳುತ್ತ ಸಂಘಟನಾತ್ಮಕ ಪರಿವರ್ತನೆಯೆಡೆಗೆ ಚಲಿಸಿದಾಗ ಮಾತ್ರ ಸಶಕ್ತ ಬಹುಮುಖಿ ಮಾದರಿಗಳನ್ನು ಕಾಣುವುದು ಸಾಧ್ಯ. ಯುದ್ಧ-ದಂಗೆಗಳಂತಹ ಯಾವುದೇ ಹಿಂಸೆಯನ್ನು ಮಹಿಳಾ ಸಂವೇದನೆ ವಿರೋಧಿಸುತ್ತದೆ. ಆದರೆ ಕಾರಣದ ಶೋಧದಲ್ಲಿ ತೊಡಗುವುದಿಲ್ಲ. ಆಲೋಚನಾ ವಿಧಾನದಲ್ಲಿಯೇ ಅಂತರ್ಗತಗೊಳ್ಳಬೇಕಾದ 'ರಾಜಕೀಯ ಪ್ರಜ್ಞೆ'ಯ ಕೊರತೆ ಮಹಿಳಾ ಅಭಿವ್ಯಕ್ತಿಯಲ್ಲೊಂದು ನಿರ್ವಾತವನ್ನು ಹುಟ್ಟಿಸುತ್ತಿದೆ. ಪ್ರತಿಯೊಂದೂ ರಾಜಕೀಯವಾದದ್ದು ಎಂಬ ಸೆನ್ಸನ್ನು ಜೀರ್ಣಿಸಿಕೊಳ್ಳುವ ಮೂಲಕ ಕನ್ನಡ ಮಹಿಳಾ ಕಾವ್ಯ ತನ್ನ ಆತ್ಯಂತಿಕತೆಯನ್ನು ದರ್ಶಿಸಬೇಕಾಗಿದೆ.

❑

"....ಸ್ತ್ರೀ ವರ್ಣನೆಗಳಲ್ಲಿ ರಸ ಸೂಸುವ ವರ್ಣನೆಗಳಿರುತ್ತವೆ. ಇನ್ನೇನನ್ನೂ ಅವರ ವಿಷಯದಲ್ಲಿ ಹೇಳಲಾಗುವುದಿಲ್ಲವೇನೋ ಎಂಬಷ್ಟು, ಎಂದಿಗೂ ಅಷ್ಟೇ. ಗಂಡಿನ ಆಸೆಗಳನ್ನು ತೀರಿಸುವುದಕ್ಕಾಗಿ ಮಾತ್ರ ಹುಟ್ಟಿ ಬದುಕಿದ್ದಾರೇನೋ ಎಂಬಷ್ಟು ರಂಜಕ ವರ್ಣನೆಗಳು. ಪ್ರತಿಯೊಂದು ಹೆಣ್ಣು ಜೀವವೂ ತನ್ನದೇ ಆದ ಭಾವಪ್ರಪಂಚದ ನಡತೆ ಕಾಣಿಸುವ ಸ್ವತಂತ್ರ ಜೀವ, ಆಕಾಂಕ್ಷೆಯುಳ್ಳ ವ್ಯಕ್ತಿಯಾಗಿ ಕಾಣಿಸುವಂತಿದ್ದರೆ ಚೆನ್ನಾಗಿತ್ತು. ಅದು ನಮ್ಮ ಸಾಹಿತ್ಯದ ಪಾಲಿಗೆ ಫಲಿಸಲಿಲ್ಲ..."

ವಿ. ಸೀತಾರಾಮಯ್ಯ, *(ಮಹಾಕವಿ ಪಂಪ; ಪು. ೨೯೭)*

"....ಪುರುಷ ಕೇಂದ್ರಿತ ಪ್ರಜ್ಞೆ ಸ್ತ್ರೀಯರ ಸ್ವಭಾವ, ಶಕ್ತಿ ಮತ್ತು ಪಾತ್ರಗಳನ್ನು ನಿರ್ಣಯಿಸಿ, ಆ ನಿರ್ಣಯಕ್ಕೆ ಹೊಂದುವ ಅಥವಾ ನಾಣ್ಯದ ಅಚ್ಚಿನಲ್ಲಿ ಎರಕ ಹೊಯ್ದ ಮಾದರಿಗಳಲ್ಲಿ ಚಾಲ್ತಿಗೆ ಬಿಟ್ಟಿತು... (ಇವು) ಗಂಡಸಿನ ಮಾನಸಿಕ, ಭೌತಿಕ, ಜೈವಿಕ ಅಗತ್ಯಗಳಿಗೆ ಹೊಂದುವಂಥವು, ಸೀತೆ, ಸಾವಿತ್ರಿ, ದಮಯಂತಿಯಂಥ ಮಾದರಿಗಳು. ಇಂಥ ಮಾದರಿಗಳ ಸೌಂದರ್ಯ, ಶೃಂಗಾರ, ಪಾತಿವ್ರತ್ಯ, ತಾಯ್ತನಕ್ಕೆ ಒತ್ತು ಬಿತ್ತು..."

ವಿಜಯಾದಬ್ಬೆ, *(ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಪು. ೬೭)*

## ಒಂದು ಅನಿಸಿಕೆ

ಡಿಸೆಂಬರ್ ತಿಂಗಳ ನಮ್ಮ ಮಾನಸ ಓದಿ ಖುಷಿಯಾಯಿತು. 'ಬೀನಸು' ಅವರು 'ಮಹಿಳಾ ಸಮ್ಮೇಳನಗಳು;ಮರುಚಿಂತನೆ' ಲೇಖನದಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳು ನಿಜಕ್ಕೂ ಚಿಂತನಯೋಗ್ಯವಾಗಿವೆ. ಮಂಡ್ಯದಲ್ಲಿ ನಡೆದ ಲೇಖಕಿಯರ ಸಮ್ಮೇಳನ ಕುರಿತ ಎಚ್.ಎಸ್. ಚಂಪಾವತಿಯವರು ಮಾಡಿದ ವರದಿ ಮತ್ತು ಟಿಪ್ಪಣಿಗಳು ಸಂಚಿಕೆಯ ಮೌಲ್ಯವನ್ನು ಹೆಚ್ಚಿಸಿವೆ (ಆ ಗಲಾಟೆಯಲ್ಲಿ ಚಂಪಾವತಿ ಈ ಎಲ್ಲವನ್ನೂ ದಾಖಲಿಸಿಕೊಂಡಿದ್ದು ಆಶ್ಚರ್ಯಕರ). 'ಅಪೌಷ್ಟಿಕತೆ ಮತ್ತು ಲಿಂಗ ತಾರತಮ್ಯ' ಲೇಖನ ಮಾಹಿತಿ ಪೂರ್ಣವಾಗಿದೆ.

ಎಂ.ಎಚ್. ಕೃಷ್ಣಯ್ಯನವರು ಬರೆದ 'ಎನ್ ಪುಷ್ಪಮಾಲಾ; ಅಭಿನೀತಕಲೆ' ಪುಷ್ಪಮಾಲಾ ಅವರ ವೈಶಿಷ್ಟ್ಯವನ್ನು ಸಮರ್ಥವಾಗಿ ಪರಿಚಯಿಸುವ ಬರಹವಾಗಿದೆ. 'ಲೇಡಿ ಇನ್ ಮೂನ್‌ಲೈಟ್' 'ಓಲಿಯೋಗ್ರಾಫ್ ವರ್ಣಚಿತ್ರ ಲಕ್ಷ್ಮಿ' ಕಪ್ಪು ಬಿಳುಪಿನಲ್ಲೂ ಸುಂದರವಾಗಿ ಅಚ್ಚಾಗಿವೆ. ಆ ಚಿತ್ರಗಳನ್ನು ಇಂಟರ್‌ನೆಟ್‌ನಲ್ಲಿ ಬಣ್ಣದಲ್ಲಿ ನೋಡಿದ್ದೆ.

ಚಿಕ್ಕಂದಿನ ನಮ್ಮ ಲೋಕದಲ್ಲಿ ಬಣ್ಣವೆಂದರೆ "ನೀಲಿ ಬಾನಲಿ ಹಸುರು ನೆಲದಲಿ ಕಂಗಳೆರಡನೆ ಬಲ್ಲವು" ಎಂಬಂತೆ ಪ್ರಕೃತಿಯ ಬಣ್ಣಗಳಲ್ಲಿ ತನ್ಮಯಳಾಗಿದ್ದೆ ಆಗ. ವರ್ಣಮಯವಾದ ಕಲ್ಪನೆಯ ಜಗತ್ತನ್ನು ಸೃಷ್ಟಿಸಿಕೊಳ್ಳಲು ನೆಪವಾಗಿದ್ದವುಗಳು ರವಿವರ್ಮನ ದೇವರ ಚಿತ್ರಗಳು. ನನ್ನ ಹಳ್ಳಿಯ ಮನೆಯ ಜಗುಲಿಯ ಗೋಡೆಯ ಮೇಲೆ ಸಾಲಾಗಿದ್ದ ದೇವರ ಪಟಗಳು ದೊಡ್ಡಗಾತ್ರದ ಲಕ್ಷ್ಮಿ, ಸರಸ್ವತಿ, ಕೃಷ್ಣ ಮುಂತಾದ ರವಿವರ್ಮ ವಿರಚಿತ, ಬಣ್ಣದ ಚಿತ್ರಗಳು ತಮ್ಮ ಗಾಜಿನ ಚೌಕಟ್ಟಿನೊಳಗಿಂದ ನಮ್ಮನ್ನು ಸೆಳೆಯುತ್ತಿದ್ದವು. ಆ ಬಣ್ಣಗಳು, ಹಕ್ಕಿಗಳು, ಜಲಪಾತಗಳು ತಾವರೆ ಹೂ, ಇತರೆ ವಿವರಗಳು ಅದ್ಭುತವಾಗಿ ಕಾಣಸುತ್ತಿದ್ದವು. ಲಕ್ಷ್ಮಿಯ ಭಾರಕ್ಕೆ ತಾವರೆ ಹೂ ನಲುಗದೇ? ಆ ಹೂವಿನ ದಳಗಳನ್ನು ಎಣಿಸಿ ಸೋಲುತ್ತಿದ್ದೆವು. ಆ ಚಿತ್ರಗಳನ್ನೇ ನೋಡುತ್ತಾ ರಜಾದಿನಗಳ ಮಧ್ಯಾಹ್ನ ಕಲ್ಪನೆಯ ಬೆನ್ನತ್ತಿ ಹೋಗುತ್ತಿದ್ದೆ. ಅದೇ 'ಲಕ್ಷ್ಮಿ' ಚಿತ್ರವನ್ನು ಸ್ವತಃ ಪುಷ್ಪಮಾಲ ಅವರೇ ಲಕ್ಷ್ಮಿಯಾಗಿ ಪುನಃ ಸೃಷ್ಟಿಸಿರುವುದನ್ನು ನೋಡಿ ಬಾಲ್ಯದ ಆ ದಿನಗಳು ಮತ್ತೆ ನೆನಪಾದವು.

ಪುಷ್ಪಮಾಲಾ ಅವರ ಫ್ಯಾಂಟಮ್ ಲೇಡಿ ಸರಣಿಯ ಒಂದು ಚಿತ್ರ 'ರೈಲ್ವೇ ಪ್ಲಾಟ್‌ಫಾರಂನಲ್ಲಿ ಒರಗು ಬೆಂಚಿನ ಪಕ್ಕ ಲೈಟ್‌ಕಂಬದ ಬಳಿ ಒಂಟಿಯಾಗಿ ನಿಂತಿರುವ ಮಹಿಳೆ' ಜಯಂತ ಕಾಯ್ಕಿಣಿಯವರ 'ತೂಫಾನ್ ಮೇಲ್' ಕಥಾಸಂಗ್ರಹದ ಮುಖಪುಟವಾಗಿ ಪುಸ್ತಕದ ಸೌಂದರ್ಯ ಹೆಚ್ಚಿಸಿದೆ. ಇದೇ ರೀತಿ ಬೇರೆ ಬೇರೆ ಕ್ಷೇತ್ರದಲ್ಲಿ ಸಾಧನೆ ಮಾಡಿದ ಸೃಜನ ಶೀಲ ಮಹಿಳೆಯರ ಕುರಿತು ಪ್ರತಿ ಸಂಚಿಕೆಯಲ್ಲೂ ಲೇಖನಗಳಿದ್ದರೆ ಚೆನ್ನಾಗಿರುತ್ತದೆ. 'ಮಾದರಿಯಿಂದ ಸಾಧಿಸುವುದು ಏನನ್ನು' ಎಂಬ ಚಂದ್ರಮತಿಯವರ ಪ್ರಶ್ನೆ ಕೂಡಾ ಮಾರ್ಮಿಕವಾಗಿದೆ.

**ಎಲ್.ಸಿ. ಸುಮಿತ್ರಾ, ತೀರ್ಥಹಳ್ಳಿ**



## ಚಂದ್ರಕ್ಕ

ಪಕ್ಕದಾ ಮನೆ ಚಂದ್ರಕ್ಕ
ತುಂಬು ಗರ್ಭಿಣಿ ತುಂಬಿದೆದೆ
ಉಬ್ಬಿದ್ಹೊಟ್ಟೆಯಲ್ಲಿ ಆಕೆ ಸಾಕ್ಷಾತ್
ಗರ್ಭದೇವತೆ
ಆಕೆ ನೀರಿಗೆಂದು ಹೋಗುವಾಗ
ನಾ ಹಿಂದೆ ಹೋಗುವೆ
ಆಕೆಯ ಗರ್ಭದಾನೆರಳು
ನನ್ನ ಹೊಟ್ಟೆಯ ಮೇಲೆ
ಬೀಳಲೆಂದು
ಬಹಳ ವರ್ಷದ ಮರ
ನಾನು ಫಸಲಿಲ್ಲ ಬಂಜಾರದಲ್ಲಿ
ಒಮ್ಮೆಯಾದರು ಬೀಜ
ಒಡೆಯಲಿಲ್ಲ
ಇತ್ತೀಚೆಗೆ ಚಂದ್ರಮುಖಿಯ
ಸುಳಿವಿಲ್ಲ ಬಂಜೆಯಾದ ನನಗೆ
ಒಳಗಿಣುಕಲು ಧೈರ್ಯವಿಲ್ಲ
ಚಂದ್ರಕ್ಕನ ಮನೆಯಲ್ಲಿ
ಇಂದೇಕೊ ಸಡಗರ ಚಂದ್ರಕ್ಕ ಹೇಳಿದಳು.
ಸೀರೆ, ಕುಪ್ಪಸ ಕೊಡಿಸಲು.
ಪೇಟೆಗೊಯ್ಯುವರು ನನ್ನ
ಸೀರೆ, ಕುಪ್ಪಸ ಕೊಡಿಸಿ
ಕನ್ನಡಿಯ ಅರಮನೆಯ ಒಳಹೊಕ್ಕರು
ಚಂದ್ರಕ್ಕನಿಗೇಕೊ ದಿಗಿಲು
ಅರಮನೆಯ ಕನ್ನಡಿಗಳು
ಚಂದ್ರಕ್ಕನ ಗರ್ಭದೊಳ್ಹೊಕ್ಕಿ
ಅಲ್ಲಿ ಮರಿ ಚಂದ್ರಕ್ಕನ ಬಿಂಬಗಳ
ತೋರಿದವು, ಮನೆಯವರು,
ಕರಿನೆರಳುಗಳಾದರು ಕನ್ನಡಿಯ ಅರಮನೆಯ
ಕತ್ತರಿಗಳು ಚಂದ್ರಕ್ಕನ ಗರ್ಭದಲಿ ಹರಿದಾಡಿ
ಮರಿಚಂದ್ರಕ್ಕ ಆಕಾಶದಲ್ಲಿ ಹಾರಾಡ
ಹೊರಟಳು.

*Edited, Printed, Published and owned by Rajeshwari H.S., No. 114/5, 9th Cross 2nd Main, Chamarajpet, Bangalore - 560 018.*
*Printed at ILA Mudrana, No. 36, 40 Ft. Road, Raghavanagara, New Timberyard Layout, Bangalore - 560 026.*
*Published at No. 114/5, 9th Cross, 2nd Main, Chamarajpet, Bangalore - 560 018. Editor : Rajeshwari H.S.*

# ತಾಯಂದಿರನ್ನು ಗಟ್ಟಿಯಾಗಿಸಿ

ತಮ್ಮ ಪತ್ರಿಕೆ 'ನಮ್ಮ ಮಾನಸ' (ಸಂಪುಟ ೧, ಸಂಚಿಕೆ ೮)ದಲ್ಲಿ ಪುಟ ೧೩ರಲ್ಲಿ, 'ಶಾಂತಾನಾಗರಾಜ್‌ರವರು ತಮ್ಮ ಭಾಷಣದುದ್ದಕ್ಕೂ ಗಂಡು ಮಕ್ಕಳನ್ನು ಹೇಗೆ ಬೆಳೆಸಬೇಕೆಂದು (ಗಂಡು ಮಕ್ಕಳು ಕಲ್ಲು ಹೊಡೆಯದಂತೆ, ಹಿಂಸೆಗೆ ಪ್ರಚೋದಿಸದಂತೆ ಇತ್ಯಾದಿ) ತಾಯ್ತನದ ಹಿರಿಮೆಯ ಅರಿವು ಮೂಡಿಸಿದರು. ಹೀಗಿದೆ ನಮ್ಮ ಸ್ತ್ರೀವಾದಿ ಕಲ್ಪನೆ' ಎಂದು ವ್ಯಂಗ್ಯವಾಡಿದ್ದೀರಿ.

ಮೊದಲನೆಯದಾಗಿ, ನಾನು ಆ ದಿನ ಭಾಷಣವನ್ನೇ ಮಾಡಲಿಲ್ಲ ಆರೇ ಸಾಲುಗಳನ್ನು ಅಲ್ಲಿದ್ದ ಸ್ತ್ರೀಶಕ್ತಿ ಯೋಜನೆಯ ಮಹಿಳೆಯರು ಗಮನ ಹರಿಸಬಹುದಾದಂತೆ ಗಟ್ಟಿಯಾಗಿ ಉಚ್ಚರಿಸಿದೆ ಅಷ್ಟೆ.

ಎರಡನೆಯದಾಗಿ, 'ನಾನು ತಾಯ್ತನದ ಹಿರಿಮೆ'ಯನ್ನು ಬೋಧಿಸಲಿಲ್ಲ. ಬದಲಾಗಿ ಅದನ್ನು ಒಂದು 'ಪವರ್' ಆಗಿ ಬಳಸಿ ಕೊಳ್ಳಿ ಎಂದು ಕರೆಕೊಟ್ಟೆ.

ಮೂರನೆಯದಾಗಿ, ನಾನು ಈ ದಿಸೆಯಲ್ಲಿ 'ಸ್ತ್ರೀವಾದಿ'ಯಾಗಿ ಮಾತ್ರ ಯೋಚಿಸುವುದಿಲ್ಲ. ಅದರಲ್ಲೂ ಇತ್ತೀಚೆಗೆ ಸ್ತ್ರೀವಾದದ ಹೆಸರಲ್ಲಿ ನಡೆಯುತ್ತಿರುವ ಸ್ವಚ್ಛಂದ, ಅನೈತಿಕತೆ, ಸ್ವಾರ್ಥ ಸಾಧನೆಗಳು ನಾನು 'ಬರೀ ಸ್ತ್ರೀವಾದಿ' ಎಂದು ಹಣೆಪಟ್ಟಿ ಕಟ್ಟಿಕೊಳ್ಳದಂತೆ ಮಾಡಿವೆ. ನಾನು ಮನಃಶಾಸ್ತ್ರದ ವಿದ್ಯಾರ್ಥಿನಿಯೂ ಆಗಿರುವುದರಿಂದ ಲಿಂಗಾಧರಿತ ಅಲ್ಲದ, ಕೇವಲ ಮಾನವತಾವಾದದಲ್ಲೇ ನನಗೆ ಹೆಚ್ಚು ಒಲವು.

ನನ್ನನ್ನು ಗೇಲಿ ಮಾಡುವ ಹಕ್ಕು, ಸ್ವಾತಂತ್ರ್ಯ ತಮಗಿರಬಹುದು. ಆದರೆ ಇದು ಸರಿಯಾದ ಗ್ರಹಿಕೆಯಿಂದ ಮೂಡಿಬಂದದ್ದಲ್ಲ ಎಂದು ಸವಿನಯದಿಂದ ತಮಗೆ ತಿಳಿಸುತ್ತಿದ್ದೇನೆ.

ಇತ್ತೀಚೆಗೆ ನಾನು ನಾಡಿನಾದ್ಯಂತ ಸ್ತ್ರೀಶಕ್ತಿ ಸಂಘಟನೆಗಳ ಕಾರ್ಯಕ್ರಮಕ್ಕೆ ಹೋಗುತ್ತಿರುತ್ತೇನೆ. ಅವರೊಡನೆ ಮುಖಾಮುಖಿ ಯಾದಾಗ ಈ 'ಅರಿವುಳ್ಳ ತಾಯ್ತನ'ದ ಬಗ್ಗೆ ತಿಳಿಸುವ ಪ್ರಯತ್ನ ಮಾಡುತ್ತೇನೆ. ಕೆಲವಾರು ಮಹಿಳೆಯರು ನಾನು ಹೇಳುವ ಈ ಸೂಕ್ಷ್ಮಗಳನ್ನು ಗ್ರಹಿಸುತ್ತಿದ್ದಾರೆ. ಹೆಣ್ಣು ಮಾನಸಿಕವಾಗಿ ಬಲಿಷ್ಠವಾದರೆ, ಮತ್ತು ಸಮಾಜಮುಖಿ ಚಿಂತನೆ ನಡೆಸಿದರೆ ಮುಂದಿನ ಪೀಳಿಗೆಗೆ ಅದು ರವಾನೆಯಾಗುತ್ತದೆ ಎಂದು ಬಲವಾಗಿ ನಂಬಿರುವವಳು ನಾನು. ನಾವೆಲ್ಲರೂ ಆತ್ಮಬಲವನ್ನು ಪಡೆದಿರುವುದು ನಮ್ಮ ತಾಯಂದಿರಿಂದಲೇ. 'ತಾಯಂದಿರನ್ನು ಪೂಜಿಸಬೇಡಿ, ಗಟ್ಟಿಯಾಗಿಸಿ' ಎನ್ನುವ ಘೋಷವಾಕ್ಯ ನನ್ನದು. ಇದು ನಿಮ್ಮ ಸ್ತ್ರೀವಾದಕ್ಕೆ ಹೊಂದುವುದಿಲ್ಲವೆಂದು ನೀವೆಂದುಕೊಂಡರೆ ನನಗೇನೂ ಬೇಜಾರಿಲ್ಲ.

*ಶಾಂತಾನಾಗರಾಜ್*

# ಹಂಚಿಕೊಳ್ಳುವ ತಾಯ್ತನ ಉಪಯುಕ್ತ

**(ಶಾಂತಾ ನಾಗರಾಜರವರ ಪತ್ರಕ್ಕೆ ಪ್ರತಿಕ್ರಿಯೆ)**

ತಾಯ್ತನ ಎನ್ನುವುದನ್ನು ಈವರೆಗೆ ಹಲವಾರು ರೀತಿಗಳಲ್ಲಿ ಹೆಂಗಸರ ವ್ಯಕ್ತಿತ್ವವನ್ನು ಟ್ರ್ಯಾಪ್ ಮಾಡಲು ಬಳಸಲಾಗುತ್ತಿದೆ. ಮನೆಯ ಗೋಡೆಯೊಳಗೆ ಬಂಧಿಸುವುದಕ್ಕಿರಬಹುದು, ಮರು ಉತ್ಪಾದನೆಯ ಹಂತದಲ್ಲಿ ಬಳಸಿಕೊಳ್ಳಲು ಇರಬಹುದು, ಸಾಂಸ್ಕೃತಿಕ ಪ್ರತಿನಿಧೀಕರಣಕ್ಕಿರ ಬಹುದು. ಸಾಂಸ್ಕೃತಿಕ ಉಳಿಸುವಿಕೆ, ಬೆಳೆಸುವಿಕೆಗೆ, ಧರ್ಮ, ಸಂಸ್ಕೃತಿಯ ಪುನರುತ್ಥಾನಕ್ಕೆ ಹೀಗೆ ಹತ್ತು ಹಲವಾರು ದೆಸೆಯಲ್ಲಿ ಚಾರಿತ್ರಿಕವಾಗಿ 'ತಾಯ್ತನ'ವನ್ನು ಚರ್ವಿತಚರ್ವಣ ವಿಷಯವನ್ನಾಗಿಸುತ್ತಲೇ ಇರುವುದನ್ನು ನಾವು ನೋಡಿದ್ದೇವೆ. ಕೆಲವು ರಾಜಕೀಯ ಪಕ್ಷಗಳು 'ತಾಯ್ತನ'ವನ್ನು ವಿಜೃಂಭಿಸಿ ಹೇಳುವ ಮೂಲಕ ಹೆಣ್ಣಿನ ಸ್ಥಾನಮಾನ ಹಿಂದೂಧರ್ಮದಲ್ಲಿ ಪೂಜನೀಯವಾಗಿದೆ ಎಂದೂ ಕೂಡ ಘೋಷಿಸುತ್ತದೆ.

'ತಾಯಂದಿರನ್ನು ಪೂಜಿಸಬೇಡಿ, ಗಟ್ಟಿಯಾಗಿಸಿ' ಎನ್ನುವ ನಿಮ್ಮ ಘೋಷಣೆಯನ್ನು ಸ್ವಲ್ಪ ಬದಲಿಸಿ 'ತಾಯ್ತನ ಗಟ್ಟಿಯಾಗಿಸೋಣ' ಎನ್ನೋಣ. ಎಂದರೆ ತಾಯ್ತನದಲ್ಲಿ ಇರುವ ಸಹನೆ, ತ್ಯಾಗ, ಸಂಕಷ್ಟದ ಗುಣಗಳು ಗಂಡು–ಹೆಣ್ಣು ಎನ್ನುವ ಭೇದವಿಲ್ಲದೇ ಎಲ್ಲರಲ್ಲೂ ಬೆಳೆಯು ವಂತಾಗಲಿ. ಹೆಣ್ಣಾಗಿ ಹುಟ್ಟಿದ ಮಾತ್ರಕ್ಕೆ 'ತಾಯ್ತನ' ನಮಗೇನೂ ವರವಾಗಿ ಬಂದಿರುವುದಿಲ್ಲ. ತಂದೆ–ತಾಯಿ ಇಬ್ಬರಲ್ಲೂ 'ಪೋಷಿಸುವ' ಗುಣ ಬೆಳೆದರೆ–ಹೆಣ್ಣಿಗೆ 'ತಾಯ್ತನ' ಹೊರೆಯೂ ಆಗುವುದಿಲ್ಲ. ಈ ಸಮಾಜ ಕೂಡಾ ಮಾನವಮುಖಿಯಾಗಿ ಬೆಳೆಯುವಂತಾಗುತ್ತದೆ.

ಸ್ತ್ರೀವಾದ ಹೇಳುವುದು ಇದನ್ನೇ. ತಾಯ್ತನ ನಮಗೇ ಬೇಕು ಎನ್ನುವ ಸ್ವಾರ್ಥ ಬೇಡ. ಇದನ್ನು ಎಲ್ಲರೂ ಹಂಚಿಕೊಳ್ಳೋಣ. ಈ ರೀತಿಯ ಮಾನವತಾವಾದದ ದೃಷ್ಟಿಕೋನ ಸ್ತ್ರೀವಾದಿ ನೆಲೆಯಲ್ಲಿ ಅಡಕವಾಗಿದೆ. ಹಂಚಿಕೊಳ್ಳುವ ವಿಚಾರದಲ್ಲಿ – ದಾರಿಯು ಸಂಘರ್ಷದ ಮಾದರಿಯದಾಗಿದ್ದರೆ ಅದನ್ನು ಸ್ವೀಕರಿಸುತ್ತಲೇ ವಾಸ್ತವದ ಬದಲಾವಣೆಗೆ ನಾವು ಪ್ರಯತ್ನಿಸೋಣ ಎಂದೇ ಸ್ತ್ರೀವಾದಿಗಳು ಆಲೋಚಿಸುತ್ತಾರೆ. ಸ್ವಚ್ಛಂದ, ಅನೈತಿಕತೆ, ಸ್ವಾರ್ಥ ಸಾಧನೆಗಳೆಲ್ಲ 'ಸ್ತ್ರೀವಾದಿ' ಪೇಟೆಂಟ್ ಎಂಬ ನಿಮ್ಮ ನಿಲುವು ಸಂವೇದನಾಶೀಲರಿಗೆ ಸಖೇದಾಶ್ಚರ್ಯ ತರುವಂಥದ್ದು!.

ತಾಯ್ತನದ ಮೌಲ್ಯಗಳನ್ನು ರೂಢಿಸಿಕೊಳ್ಳುತ್ತಾ ಪುರುಷ–ಮಹಿಳೆ ಇಬ್ಬರೂ ಬಲಿಷ್ಠರಾಗಲಿ, ಯುದ್ಧ ಬೇಡ, ಶಾಂತಿ ಬೇಕು ಎನ್ನುವ ಶಾಂತಿಪ್ರಿಯರಾಗಲಿ ಮುಂದಿನ ಜನಾಂಗ ತಂದೆ–ತಾಯಿ ಇಬ್ಬರಿಂದಲೂ ಆತ್ಮಬಲ ಪಡೆಯುವಂತಾಗಲಿ. ಸದ್ಯಕ್ಕೆ ಮಹಿಳೆಯರ 'ತಾಯ್ತನದ' ಹೊರೆ ಕಡಿಮೆ ಮಾಡೋಣ. ಅವರು ಈ ಸಮಾಜದಲ್ಲಿ ಮುಖಾಮುಖಿಯಾಗಿ ಸ್ವತಂತ್ರರಾಗಿ, ಸ್ವಂತ ವ್ಯಕ್ತಿತ್ವಗಳಲ್ಲಿ ಉಸಿರಾಡುವಂತಾಗುವ ದೆಸೆಯಲ್ಲಿ 'ಹಂಚಿಕೊಳ್ಳುವ ತಾಯ್ತನ' ಉಪಯುಕ್ತವಾಗಬಹುದಲ್ಲವೆ?

*ಚಂಪಾವತಿ ಎಚ್.ಎಸ್.*

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ–ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.





Registered Magazine

Posted on 9th of every month at Chamarajpet Post Office

120
Pushpa H.S.
No, 95 , Y. V. Annaiah Rd
Yalachenahalli,
J. P. Nagara Post
Bangaluru-560078

ವಿಳಾಸ :
ನಮ್ಮ ಮಾನಸ
34/1, 2ನೇ ಕ್ರಾಸ್, ಆಜಾದ್ ನಗರ, ಚಾಮರಾಜಪೇಟೆ,
ಬೆಂಗಳೂರು – 560 018